CPMG / KA / BG-GPO/13/2003-2005

ವಿಶ್ವಮಾನವ ವರ್ಷ



# ಕರ್ನಾಟಕ ರಾಜ್ಯಪತ್ರ

ಅಧಿಕೃತವಾಗಿ ಪ್ರಕಟಿಸಲಾದುದು

| ಸಂಪುಟ ೧೩೯ | ಬೆಂಗಳೂರು, ಗುರುವಾರ, ನವೆಂಬರ್ ೧೧, ೨೦೦೪ (ಕಾರ್ತಿಕ ೨೦, ಶಕ ವರ್ಷ ೧೯೨೬) | ಸಂಚಿಕೆ ೪೫ |
|---|---|---|

## ಭಾಗ - ೧

## ರಾಜ್ಯ ಸರ್ಕಾರದ ಮುಖ್ಯ ಆದೇಶಗಳು ಹಾಗೂ ಸುತ್ತೋಲೆ ಮುಂತಾಗಿ ಎಲ್ಲಾ ಇಲಾಖೆಗಳಿಗೂ ಸಂಬಂಧಿಸಿದ ಆದೇಶಗಳು.

### ಕಂದಾಯ ಸಚಿವಾಲಯ

**ವಿಷಯ :** ವಿದ್ಯಾ ಪ್ರಸಾರಕ ಸಮಿತಿ, ಕಾರವಾರ ಈ ಸಮಿತಿಗೆ ಆಡಳಿತಾಧಿಕಾರಿಯನ್ನು ನೇಮಕ ಮಾಡುವ ಬಗ್ಗೆ.

**ಓದಲಾಗಿದೆ :**
1. ಶಿಕ್ಷಣ ಇಲಾಖೆಯ ಅ.ಟಿ. ಸಂಖ್ಯೆ: ಇಡಿ. 131 ಎಂಪಿಎಸ್ 95 ದಿನಾಂಕ: 2.7.99
2. ಸರ್ಕಾರದ ಪತ್ರ ಸಂಖ್ಯೆ: ಕಂಇ 61 ಮುನೋಸೊ 99, ದಿನಾಂಕ: 4.8.99
3. ಜಿಲ್ಲಾ ನೋಂದಣಾಧಿಕಾರಿ, ಕಾರವಾರ ಇವರ ಪತ್ರ ಸಂಖ್ಯೆ: ಜಿನೋ:ಸಂನೋ: ವಿಚಾರಣೆ:1:97-98 ದಿನಾಂಕ: 9.5.2000
4. ಕಾರಣ ಕೇಳುವ ಸೂಚನಾ ಪತ್ರ ಸಂಖ್ಯೆ: ಕಂಇ 61: ಮುನೋಸೊ 99 ದಿನಾಂಕ: 18.7.2000
5. ಸಮಿತಿಯ ಅಧ್ಯಕ್ಷರು ಮತ್ತು ಗೌರವ ಕಾರ್ಯದರ್ಶಿಗಳಿಂದ ಲಿಖಿತ ಹೇಳಿಕೆ ದಿನಾಂಕ: 12.8.2000
6. ಸರ್ಕಾರದ ಪತ್ರ ಸಂಖ್ಯೆ: ಕಂಇ 37 ಮುನೋಸೊ 04, ದಿನಾಂಕ: 26.7.2004
7. ಜಿಲ್ಲಾ ನೋಂದಣಾಧಿಕಾರಿಗಳು, ಕಾರವಾರ ಇವರ ಪತ್ರ ಸಂಖ್ಯೆ: ಜಿನೋ:ಸಂನೋ: ವಿಚಾರಣೆ: 1/97-98 ದಿನಾಂಕ: 18.8.04

**ಪ್ರಸ್ತಾವನೆ:**

ಮೇಲೆ ಓದಲಾದ(1)ರ ಅನಧಿಕೃತ ಟಿಪ್ಪಣಿಯಲ್ಲಿ ಸರ್ಕಾರದ ಅಧೀನ ಕಾರ್ಯದರ್ಶಿ, ಶಿಕ್ಷಣ ಇಲಾಖೆ, ಇವರು ಕಾರವಾರ ವಿದ್ಯಾ ಪ್ರಸಾರಕ ಸಮಿತಿಗೆ ಆಡಳಿತಾಧಿಕಾರಿಯನ್ನು ನೇಮಕ ಮಾಡುವಂತೆ ಶಿಕ್ಷಣ ಇಲಾಖೆಯು ಅನಧಿಕೃತ ಟಿಪ್ಪಣಿಯಲ್ಲಿ ಕೋರಿದೆ.

ಶಿಕ್ಷಣ ಇಲಾಖೆಯು ಕೋರಿಕೆಯನ್ವಯ ಸಂಸ್ಥೆಯಲ್ಲಿ ಉಂಟಾಗಿರುವ ಸಮಸ್ಯೆಯ ಬಗ್ಗೆ ಖುದ್ದಾಗಿ ಪರಿಶೀಲನೆ ನಡೆಸಿ ಒಂದು ವಸ್ತುನಿಷ್ಠ ವರದಿಯನ್ನು ಸರ್ಕಾರಕ್ಕೆ ಸಲ್ಲಿಸುವಂತೆ ಮೇಲೆ ಓದಲಾದ-(2)ರಲ್ಲಿ ಜಿಲ್ಲಾ ನೋಂದಣಾಧಿಕಾರಿಗಳು, ಕಾರವಾರ, ಉತ್ತರ ಕನ್ನಡ ಜಿಲ್ಲೆ ಇವರನ್ನು ಕೋರಲಾಗಿತ್ತು. ಅದರನ್ವಯ ಮೇಲ್ಕಂಡ ಸಮಿತಿಯ ವಿಚಾರಣೆಯನ್ನು ಸಹಕಾರ ಸಂಘಗಳ ಸಹಾಯಕ ನಿಬಂಧಕರು, ಕಾರವಾರರವರಿಂದ ನಡೆಸಿರುತ್ತಾರೆ. ಸದರಿ ವಿಚಾರಣಾ ವರದಿಯಲ್ಲಿ ಸಮಿತಿಯ ಕಾರ್ಯಚಟುವಟಿಕೆಗಳು ಅವ್ಯವಹಾರಗಳಿಂದ ಕೂಡಿದ್ದು, ಕರ್ನಾಟಕ ಸಂಘಗಳ ನೋಂದಣಿ ಕಾಯ್ದೆ ಹಾಗೂ ಸಮಿತಿಯ ನಿಯಮಾವಳಿಗಳ ಉಲ್ಲಂಘನೆಯಾಗಿರುವುದು ಮೇಲ್ನೋಟಕ್ಕೆ ಸಾಬೀತಾಗಿರುವುದು ಕಂಡುಬಂದಿದ್ದರಿಂದ ಸಮಿತಿಯು ನಡೆಸುತ್ತಿರುವ ಚಿತ್ರಕಲಾ ಶಾಲೆಯ ಹಿತದೃಷ್ಟಿಯಿಂದ ಹಾಗೂ ಸಮಿತಿಯ ಸದಸ್ಯರುಗಳಲ್ಲಿ ಸೌಹಾರ್ದಯುತ ವಾತಾವರಣ ನಿರ್ಮಾಣಕ್ಕೆ ಅವಕಾಶ ಉಂಟು ಮಾಡಲು ಕರ್ನಾಟಕ ಸಂಘಗಳ ನೋಂದಣಿ ಕಾಯ್ದೆಯ ಕಲಂ 27-ಎ ಪ್ರಕಾರ ಆಡಳಿತಾಧಿಕಾರಿಯನ್ನು ನೇಮಕ ಮಾಡುವಂತೆ ಮೇಲೆ ಓದಲಾದ-(3)ರಲ್ಲಿ ಜಿಲ್ಲಾ ನೋಂದಣಾಧಿಕಾರಿಗಳು, ಕಾರವಾರ ಇವರು ವರದಿ ಮಾಡಿರುತ್ತಾರೆ.

ಜಿಲ್ಲಾ ನೋಂದಣಾಧಿಕಾರಿಯವರ ವರದಿಯನ್ನು ಕೂಲಂಕಷವಾಗಿ ಪರಿಶೀಲಿಸಿ ಮೇಲೆ ಓದಲಾದ-(4)ರಲ್ಲಿ ಸಮಿತಿಯ ಅಧ್ಯಕ್ಷರು ಮತ್ತು ಗೌರವ ಕಾರ್ಯದರ್ಶಿಯವರಿಗೆ ಕಾರಣ ಕೇಳುವ ನೋಟೀಸನ್ನು, ದಿನಾಂಕ: 18.7.2000 ರಂದು ಜಾರಿ ಮಾಡಿ, ವಿದ್ಯಾ ಪ್ರಸಾರಕ

ಸಮಿತಿಗೆ ಆಡಳಿತಾಧಿಕಾರಿಯನ್ನು ಏಕೆ ನೇಮಕ ಮಾಡಬಾರದು ಎಂಬ ಬಗ್ಗೆ ನೋಟೀಸು ತಲುಪಿದ 15 ದಿನದೊಳಗಾಗಿ ಸರ್ಕಾರಕ್ಕೆ ಲಿಖಿತ ಹೇಳಿಕೆಯನ್ನು ಸಲ್ಲಿಸುವಂತೆ ಸೂಚಿಸಲಾಗಿತ್ತು.

ಮೇಲೆ ಓದಲಾದ (5)ರಲ್ಲಿ ಸಮಿತಿಯ ಅಧ್ಯಕ್ಷರು ಮತ್ತು ಗೌರವ ಕಾರ್ಯದರ್ಶಿಯವರು ದಿನಾಂಕ: 12.8.2000 ರಂದು ಲಿಖಿತ ಹೇಳಿಕೆಯನ್ನು ಸಲ್ಲಿಸಿ 1985 ರಿಂದ ಇಲ್ಲಿಯವರೆಗೂ ಪ್ರತಿ ವರ್ಷವೂ ಲೆಕ್ಕಪರಿಶೋಧಕರಿಂದ ಲೆಕ್ಕ ತಪಾಸಣೆ ನಡೆಸಿ, ಲೆಕ್ಕ ಪತ್ರವನ್ನು ಜಿಲ್ಲಾ ನೋಂದಣಾಧಿಕಾರಿಗಳಿಗೆ ಸಲ್ಲಿಸುತ್ತಾ ಬಂದಿರುತ್ತೇವೆ. ಆದರೆ ಸದರಿ ಅಧಿಕಾರಿಯವರು ಹಲವಾರು ಮಹತ್ತರ ಘಟನೆಗಳನ್ನು, ನ್ಯಾಯಾಲಯಗಳ ತೀರ್ಪುಗಳನ್ನು, ಸಂಸ್ಥೆಯ ಮಹತ್ತರ ನಿರ್ಣಯಗಳನ್ನು ಬದಿಗೊತ್ತಿ, ಸಂಸ್ಥೆಯಲ್ಲಿ ಕತ್ತಲೆಯಲ್ಲಿಟ್ಟಿರುವುದು ನಿಯಮಗಳ ಉಲ್ಲಂಘನೆಯಾಗಿರುತ್ತದೆಯೆಂದು ತಿಳಿಸಿರುತ್ತಾರೆ. ಸದರಿಯವರ ಲಿಖಿತ ಹೇಳಿಕೆಯನ್ನು ಕೂಲಂಕಷವಾಗಿ ಪರಿಶೀಲಿಸಿ ಮೇಲೆ ಓದಲಾದ (6)ರ ಸರ್ಕಾರದ ಪತ್ರದಲ್ಲಿ ಮೇಲ್ಕಂಡ ಸಮಿತಿಯಲ್ಲಿ ನಡೆಯುತ್ತಿದೆಯೆನ್ನಲಾದ ಅವ್ಯವಹಾರಗಳು ಮತ್ತು ನಿಯಮ ಬಾಹಿರ ಚಟುವಟಿಕೆಗಳ ಬಗ್ಗೆ ತನಿಖೆ ನಡೆಸಿ, ಸಂಸ್ಥೆಗೆ ಈಗಲೂ ಆಡಳಿತಾಧಿಕಾರಿಯನ್ನು ನೇಮಕ, ಮಾಡಬಹುದಾದಂತಹ ಕಾರಣಗಳು ಇವೆಯೇ ಎಂಬ ಬಗ್ಗೆ ವರದಿ ಸಲ್ಲಿಸುವಂತೆ ಜಿಲ್ಲಾ ನೋಂದಣಾಧಿಕಾರಿ, ಕಾರವಾರ ಇವರನ್ನು ಕೋರಲಾಗಿತ್ತು.

ಮೇಲೆ ಓದಲಾದ (7)ರಲ್ಲಿ ಜಿಲ್ಲಾ ನೋಂದಣಾಧಿಕಾರಿಯವರು ಸಲ್ಲಿಸಿರುವ ವರದಿಯಲ್ಲಿ ವಿದ್ಯಾ ಪ್ರಸಾರಕ ಸಮಿತಿಯಲ್ಲಿನ ಸದಸ್ಯರುಗಳ ವಿವಾದಗಳು, ಅವ್ಯವಹಾರಗಳು, ಅವ್ಯಾಹತವಾಗಿ ಮುಂದುವರೆದಿದ್ದು, ಜಿಲ್ಲೆಯಲ್ಲಿನ ಏಕೈಕ ಚಿತ್ರಕಲಾ ವಿದ್ಯಾಲಯದಲ್ಲಿನ ವಿದ್ಯಾರ್ಥಿ ಕಲಾವಿದರ ಹಾಗೂ ಶಿಕ್ಷಕರ ಹಿತದೃಷ್ಟಿಯಿಂದ ಸಮಿತಿಗೆ ಆಡಳಿತಾಧಿಕಾರಿಯನ್ನು ಕೂಡಲೇ ನೇಮಕ ಮಾಡುವಂತೆ ವರದಿ ಮಾಡಿರುತ್ತಾರೆ.

ಜಿಲ್ಲಾ ನೋಂದಣಾಧಿಕಾರಿಯವರ ವರದಿಯನ್ನು ಕೂಲಂಕಷವಾಗಿ ಪರಿಶೀಲಿಸಿದ್ದು, ವಿದ್ಯಾ ಪ್ರಸಾರಕ ಸಮಿತಿಯಲ್ಲಿ ನಿಯಮಬಾಹಿರ ಚಟುವಟಿಕೆಗಳು ಅವ್ಯಾಹತವಾಗಿ ನಡೆಯುತ್ತಿದ್ದು, ಸಮಿತಿಯಲ್ಲಿನ ಅವ್ಯವಹಾರಗಳನ್ನು ಸರಿಪಡಿಸಿ ಸಮಿತಿಗೆ ಚುನಾವಣೆ ನಡೆಸಿ, ಚುನಾಯಿತ ಆಡಳಿತ ಮಂಡಳಿಗೆ ಅಧಿಕಾರ ಹಸ್ತಾಂತರಿಸಲು ಕರ್ನಾಟಕ ಸಂಘಗಳ ನೋಂದಣಿ ಕಾಯ್ದೆಯ ಕಲಂ 27-ಎರ ಪ್ರಕಾರ, ವಿದ್ಯಾ ಪ್ರಸಾರಕ ಸಮಿತಿ, ಕಾರವಾರ ಈ ಸಮಿತಿಗೆ ಉಪ ವಿಭಾಗಾಧಿಕಾರಿಗಳು, ಕಾರವಾರ ಉಪ ವಿಭಾಗ, ಉತ್ತರ ಕನ್ನಡ ಜಿಲ್ಲೆ ಇವರನ್ನು ಆಡಳಿತಾಧಿಕಾರಿಯನ್ನಾಗಿ ನೇಮಕ ಮಾಡಲು ಸರ್ಕಾರವು ತೀರ್ಮಾನಿಸಿದೆ. ಆದ್ದರಿಂದ ಈ ಕೆಳಕಂಡ ಆದೇಶ

**ಸರ್ಕಾರಿ ಆದೇಶ ಸಂಖ್ಯೆ: ಕಂಇ 37 ಮುನೋಸೊ 2004, ಬೆಂಗಳೂರು, ದಿನಾಂಕ: 1ನೇ ಅಕ್ಟೋಬರ್ 2004**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ, ವಿದ್ಯಾ ಪ್ರಸಾರಕ ಸಮಿತಿ, ಕಾರವಾರ ಈ ಸಮಿತಿಗೆ ಕರ್ನಾಟಕ ಸಂಘಗಳ ನೋಂದಣಿ ಕಾಯ್ದೆ, 1960ರ ಕಲಂ 27-ಎ(1)(ಸಿ) ಪ್ರಕಾರ ನಿಹಿತವಾಗಿರುವ ಅಧಿಕಾರವನ್ನು ಚಲಾಯಿಸಿ ಉಪ ವಿಭಾಗಾಧಿಕಾರಿಗಳು, ಕಾರವಾರ ಉಪ ವಿಭಾಗ, ಉತ್ತರ ಕನ್ನಡ ಜಿಲ್ಲೆ, ಇವರನ್ನು ಈ ತಕ್ಷಣದಿಂದ ಜಾರಿಗೆ ಬರುವಂತೆ ಮತ್ತು ಮುಂದಿನ 6 ತಿಂಗಳ ಅವಧಿಗೆ ಅಥವಾ ಸಮಿತಿಗೆ ಚುನಾವಣೆ ನಡೆಸಿ ಚುನಾಯಿತ ಆಡಳಿತ ಮಂಡಳಿಗೆ ಅಧಿಕಾರವನ್ನು ಹಸ್ತಾಂತರಿಸುವವರೆಗೆ, ಅಥವಾ ಇವೆರಡರಲ್ಲಿ ಯಾವುದು ಮೊದಲೋ, ಅಲ್ಲಿಯವರೆಗೆ ಆಡಳಿತಾಧಿಕಾರಿಯನ್ನಾಗಿ ನೇಮಿಸಿದೆ.

ಆಡಳಿತಾಧಿಕಾರಿಯವರು ನಿಗದಿತ ಅವಧಿಯೊಳಗಾಗಿ ಸಮಿತಿಯ ಅವ್ಯವಹಾರಗಳನ್ನು ಸರಿಪಡಿಸಿ, ಸಮಿತಿಗೆ ಚುನಾವಣೆ ನಡೆಸಿ, ಚುನಾಯಿತ ಹೊಸ ಆಡಳಿತ ಮಂಡಳಿಗೆ ಆಡಳಿತಾಧಿಕಾರವನ್ನು ಹಸ್ತಾಂತರ ಮಾಡಬೇಕೆಂಬ ಷರತ್ತುಗಳನ್ನು ವಿಧಿಸಿ ಆದೇಶಿಸಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎಸ್. ಜಿ. ನಾರಾಯಣ**

ಪಿ.ಆರ್.1107

ಪೀಠಾಧಿಕಾರಿ,

ಕಂದಾಯ ಇಲಾಖೆ, (ನೋಂದಣಿ ಮತ್ತು ಮುದ್ರಾಂಕ).

## AGRICULTURE AND HORTICULTURE SECRETARIAT

**Sub :** Continuation of Ongoing Plan Schemes of the Horticulture Department during 2004-05 Additionality and New Components-Reg.

**Read :**
1. G.O. No. AHD 115 HPP 2004 dated: 29.4.2004
2. ಸರ್ಕಾರದ ಆದೇಶ ಸಂಖ್ಯೆ: ಕೃತೋಇ 139 ತೋಯೋಕಾ 2004 ದಿನಾಂಕ: 16.7.2004
3. G.O. No. AHD 221 HPP 2004 dated 04.09.2004
4. Proceedings of the Empowered Committee meeting held on 8.9.2004.

**Preamble:**

Sanction had been accorded to the Director of Horticulture to implement 14 Ongoing Schemes [11 State Sector, 2 Mission Mode and 1 Macro Mode (work plan)] along with 192 posts during the year 2004-05 subject to certain conditions on Ongoing basis vide Government Order read at (1) above. New Components in these schemes have been sanctioned vide G.O. read (2) above.

Further, sanction had been accorded to implement some of the schemes with additional budgetary provision vide. G.O. read at (3) above. In continuation of the same it is now decided to accord sanction to additional budgetary allocation and New Components as per the decision taken during the Empowered Committee meeting held on 8.9.2004 under the chairmanship of Additional Chief Secretary and Principal Secretary, Finance Department. The proceedings of which have been issued vide letter read at (4) above. Hence this order.

**Government Order No. AHD 221 HPP 2004 Bangalore dated: 5th October 2004**

Government is pleased to accord sanction to the Director of Horticulture to implement the following schemes during the year 2004-05 with budgetary provisions under State Sector as indicated below:

| Sl. No. | Scheme and Head of Account | Page No. | Amount (Rs. in lakhs) |
|---|---|---|---|
| 1. | Development of Departmental Laboratories 2401-00-119-5-01 | 46 | 75.00 |
| 2. | Horticulture Gardens 2406-02-112-0-13 | 207 | 179.40 |

The other conditions enlisted in the Government Order No. AHD 115 HPP 2004 dated 29.4.2004 remain unchanged. Further, New Components under the above Schemes have been sanctioned as per the conditions and guidelines appended to this G.O.

This order issues as per the powers delegated to the Secretaries vide, Para No. 38 of G.O.No. FD 1 TFP 96 dated: 10.7.1996 and as per the proceedings of the meeting held on 08.09.2004.

By Order and in the name of the Governor of Karnataka,
**N. MANJULA GEETHA**
Under Secretary to Government,
Agriculture & Horticulture Department.

PR-1127

**ಕಂದಾಯ ಸಚಿವಾಲಯ**

**ವಿಷಯ :** ತುಮಕೂರು ಜಿಲ್ಲೆ, ತುರುವೇಕೆರೆ ತಾಲ್ಲೂಕು, ಗೋಣಿ ತುಮಕೂರು ಗ್ರಾಮದ ಶ್ರೀ ರಾಮಾಂಜನೇಯ ರೂರಲ್ ಹೈಸ್ಕೂಲ್ ಕಮಿಟಿಗೆ ಆಡಳಿತಾಧಿಕಾರಿಯನ್ನು ನೇಮಕ ಮಾಡುವ ಬಗ್ಗೆ.

**ಓದಲಾಗಿದೆ :**
1. ಜಿಲ್ಲಾ ನೋಂದಣಾಧಿಕಾರಿಗಳು, ತುಮಕೂರು ಜಿಲ್ಲೆ ಇವರ ಪತ್ರ ಸಂಖ್ಯೆ: ಜಿ.ನೋ.ಸಂಘ ಎಸ್‌ಓಸಿ 24/64-65 ದಿನಾಂಕ: 12.7.2004.
2. ಕಾರಣ ಕೇಳುವ ಸೂಚನಾ ಪತ್ರ ಸಂಖ್ಯೆ: ಕಂಇ 34 ಮುನೋಸೊ 04, ದಿನಾಂಕ: 2.8.2004.
3. ಕಾರಣ ಕೇಳುವ ಸೂಚನಾ ಪತ್ರಕ್ಕೆ ಕಾರ್ಯದರ್ಶಿ, ಶ್ರೀ ರಾಮಾಂಜನೇಯ ರೂರಲ್ ಹೈಸ್ಕೂಲ್ ಕಮಿಟಿ ಇವರಿಂದ ಲಿಖಿತ ಸಮಜಾಯಿಸಿ ದಿನಾಂಕ: 18.8.2004

**ಪ್ರಸ್ತಾವನೆ:**

ಮೇಲೆ ಓದಲಾದ (1) ರಲ್ಲಿ ಜಿಲ್ಲಾ ನೋಂದಣಾಧಿಕಾರಿಗಳು, ತುಮಕೂರು ಜಿಲ್ಲೆ ಇವರು ತುಮಕೂರು ಜಿಲ್ಲೆ, ತುರುವೇಕೆರೆ ತಾಲ್ಲೂಕು, ಗೋಣಿ ತುಮಕೂರು ಗ್ರಾಮದಲ್ಲಿನ ಶ್ರೀ ರಾಮಾಂಜನೇಯ ರೂರಲ್ ಹೈಸ್ಕೂಲ್ ಕಮಿಟಿಯನ್ನು ಕರ್ನಾಟಕ ಸಂಘಗಳ ನೋಂದಣಿ ಕಾಯ್ದೆ, 1960ರ ಪ್ರಕಾರ ನೋಂದಾಯಿಸಲಾಗಿದ್ದು, ನೋಂದಣಿ ಸಂಖ್ಯೆಯು ಎಸ್‌ಓಆರ್-24/64-65 ಆಗಿರುತ್ತದೆ. ಈ ಸಂಸ್ಥೆಯ ಅವ್ಯವಹಾರಗಳ ಬಗ್ಗೆ ಜಿಲ್ಲಾ ನೋಂದಣಾಧಿಕಾರಿಗಳು ಹಾಗೂ ಸಂಘ ಸಂಸ್ಥೆಗಳ ನೋಂದಣಾಧಿಕಾರಿಗಳು, ತುಮಕೂರು ಜಿಲ್ಲೆ, ಇವರು ತನಿಖೆ ನಡೆಸಿ ಈ ಸಂಸ್ಥೆಯಲ್ಲಿ ಸರ್ವ ಸದಸ್ಯರ ಮಹಾಸಭೆಗಳ ವಾಸ್ತವವಾಗಿ ಪ್ರತಿ ವರ್ಷವೂ ನಡೆಯದಿದ್ದರೂ ಸಹ 2001 ರಿಂದ 2003ನೇ ಸಾಲಿನಲ್ಲಿ ಸರ್ವ ಸದಸ್ಯರ ಮಹಾ ಸಭೆಗಳು ನಡೆದಿರುವುದಾಗಿ ಸುಳ್ಳು ದಾಖಲೆಗಳನ್ನು ಸೃಷ್ಟಿಸಿ ಕರ್ನಾಟಕ ಸಂಘಗಳ ನೋಂದಣಿ ಕಾಯ್ದೆ 1960 ರ ಕಲಂ 13ನ್ನು ಉಲ್ಲಂಘಿಸಿರುವುದರಿಂದ, ಮೇಲ್ಕಂಡ ಸದರಿ ಸಂಸ್ಥೆಗೆ ಕರ್ನಾಟಕ ಸಂಘಗಳ ನೋಂದಣಿ ಕಾಯ್ದೆ 1960ರ ಕಲಂ 27ಎ ಪ್ರಕಾರ ಆಡಳಿತಾಧಿಕಾರಿಯನ್ನು ನೇಮಕ ಮಾಡುವಂತೆ ಸರ್ಕಾರಕ್ಕೆ ಶಿಫಾರಸ್ಸು ಮಾಡಿರುತ್ತಾರೆ.

ಜಿಲ್ಲಾ ನೋಂದಣಾಧಿಕಾರಿ, ತುಮಕೂರು ರವರು ಸರ್ಕಾರಕ್ಕೆ ಸಲ್ಲಿಸಿರುವ ವರದಿಯನ್ನು ಕೂಲಂಕುಶವಾಗಿ ಪರಿಶೀಲಿಸಿದ ನಂತರ, ಮೇಲೆ ಓದಲಾದ (2) ರಲ್ಲಿ ಸಂಸ್ಥೆಯ ಅಧ್ಯಕ್ಷರು/ ಕಾರ್ಯದರ್ಶಿಯವರಿಗೆ ಶ್ರೀ ರಾಮಾಂಜನೇಯ ರೂರಲ್ ಹೈಸ್ಕೂಲ್ ಕಮಿಟಿಗೆ ಆಡಳಿತಾಧಿಕಾರಿಯನ್ನು ಏಕೆ ನೇಮಕ ಮಾಡಬಾರದು ಎಂಬ ಬಗ್ಗೆ ಕಾರಣ ಕೇಳುವ ಸೂಚನಾ ಪತ್ರವನ್ನು ದಿನಾಂಕ: 2.8.2004 ರಂದು ಜಾರಿ ಮಾಡಿ, ಸೂಚನಾ ಪತ್ರ ತಲುಪಿದ 15 ದಿನಗೊಳಗಾಗಿ ಲಿಖಿತ ಹೇಳಿಕೆಯನ್ನು ನೀಡುವಂತೆ ಸೂಚಿಸಲಾಗಿತ್ತು. ಅದರಂತೆ ಮೇಲ್ಕಂಡ ಸದರಿ ಸಂಸ್ಥೆಯ ಕಾರ್ಯದರ್ಶಿಯವರು ಮೇಲೆ ಓದಲಾದ (3) ರಲ್ಲಿ ಸಲ್ಲಿಸಿರುವ ಲಿಖಿತ ಹೇಳಿಕೆಯನ್ನು ಪರಿಶೀಲಿಸಲಾಗಿದ್ದು, ಹೇಳಿಕೆಯು ಸಮರ್ಥನೀಯವಾಗಿಲ್ಲವೆಂದು ಕಂಡು ಬಂದ ಕಾರಣ, ಶ್ರೀ ರಾಮಾಂಜನೇಯ ರೂರಲ್ ಹೈಸ್ಕೂಲ್ ಕಮಿಟಿಯ ಅವ್ಯವಹಾರಗಳನ್ನು ಸರಿಪಡಿಸಿ, ಸಂಸ್ಥೆಗೆ ಚುನಾವಣೆ ನಡೆಸಿ ಚುನಾಯಿತ ಆಡಳಿತ ಮಂಡಳಿಗೆ ಅಧಿಕಾರವನ್ನು ಹಸ್ತಾಂತರಿಸಲು ಈ ಸಂಸ್ಥೆಗೆ ಕ್ಷೇತ್ರ ಶಿಕ್ಷಣಾಧಿಕಾರಿಗಳು, ತುರುವೇಕೆರೆ ತಾಲ್ಲೂಕು ಇವರನ್ನು ಆಡಳಿತಾಧಿಕಾರಿಯನ್ನಾಗಿ ನೇಮಕ ಮಾಡಲು ಸರ್ಕಾರವು ತೀರ್ಮಾನಿಸಿದೆ. ಆದ್ದರಿಂದ ಈ ಕೆಳಕಂಡ ಆದೇಶ.

**ಸರ್ಕಾರದ ಆದೇಶ ಸಂಖ್ಯೆ: ಕಂಇ 34 ಮುನೋಸೊ 2004, ಬೆಂಗಳೂರು ದಿನಾಂಕ: 29ನೇ ಸೆಪ್ಟೆಂಬರ್ 2004**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ ಶ್ರೀ ರಾಮಾಂಜನೇಯ ರೂರಲ್ ಹೈಸ್ಕೂಲ್ ಕಮಿಟಿ, ಗೋಣಿ ತುಮಕೂರು, ತುರುವೇಕೆರೆ ತಾಲ್ಲೂಕು, ತುಮಕೂರು ಜಿಲ್ಲೆ ಈ ಸಂಸ್ಥೆಗೆ ಕರ್ನಾಟಕ ಸಂಘಗಳ ನೋಂದಣಿ ಕಾಯ್ದೆ, 1960 ರ ಕಲಂ 27 ಎ (1) (ಸಿ) ಪ್ರಕಾರ ನಿಹಿತವಾಗಿರುವ ಅಧಿಕಾರವನ್ನು ಚಲಾಯಿಸಿ ಕ್ಷೇತ್ರ ಶಿಕ್ಷಣಾಧಿಕಾರಿಗಳು, ತುರುವೇಕೆರೆ ತಾಲ್ಲೂಕು ಇವರನ್ನು ಈ ಕೂಡಲೇ ಜಾರಿಗೆ ಬರುವಂತೆ ಮತ್ತು ಮುಂದಿನ 6 ತಿಂಗಳ ಅವಧಿಗೆ ಅಥವಾ ಸಂಸ್ಥೆಗೆ ನಿಯಮಾನುಸಾರ ಚುನಾವಣೆ ನಡೆಸಿ, ಚುನಾಯಿತ ಆಡಳಿತ ಮಂಡಳಿಗೆ ಅಧಿಕಾರವನ್ನು ಹಸ್ತಾಂತರಿಸುವವರೆಗೆ, ಅಥವಾ ಇವೆರಡರಲ್ಲಿ ಯಾವುದು ಮೊದಲೋ, ಅಲ್ಲಿಯವರೆಗೆ ಆಡಳಿತಾಧಿಕಾರಿಯನ್ನಾಗಿ ನೇಮಿಸಿ ಆದೇಶಿಸಿದೆ.

ಆಡಳಿತಾಧಿಕಾರಿಯವರು ಈ ಅವಧಿಯೊಳಗೆ ಸಂಸ್ಥೆಯ ಅವ್ಯವಹಾರಗಳನ್ನು ಸರಿಪಡಿಸಿ, ಚುನಾವಣೆ ನಡೆಸಿ, ಚುನಾಯಿತ ಆಡಳಿತ ಮಂಡಳಿಗೆ ಅಧಿಕಾರವನ್ನು ಹಸ್ತಾಂತರಿಸುವಂತೆ ಆದೇಶಿಸಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎಸ್. ಜಿ. ನಾರಾಯಣ**

ಪಿ.ಆರ್.1104 ಪೀಠಾಧಿಕಾರಿ, ಕಂದಾಯ ಇಲಾಖೆ (ನೋಂದಣಿ ಮತ್ತು ಮುದ್ರಾಂಕ).

## ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಸಚಿವಾಲಯ

**ವಿಷಯ :** ಶ್ರೀ ಇ. ಕೃಷ್ಣನಾರಾಯಣ, ನಿವೃತ್ತ ನಿರ್ದೇಶಕರು, ಸರ್ಕಾರೀ ಮುದ್ರಣಾಲಯ ಇವರ ವಿರುದ್ಧ ಇಲಾಖಾ ವಿಚಾರಣೆ ದಂಡನೆ ವಿಧಿಸಿ ಆದೇಶ ಹೊರಡಿಸುವ ಬಗ್ಗೆ.

**ಓದಲಾಗಿದೆ :**
1. ಸರ್ಕಾರಿ ನೋಟೀಸ್ ಸಂಖ್ಯೆ: ಸಿಆಸುಇ 42 ಎಸ್‌ಇಎನ್ 97 ದಿನಾಂಕ: 20.8.1999
2. ಸರ್ಕಾರಿ ಆದೇಶ ಸಂಖ್ಯೆ: ಸಿಆಸುಇ 42 ಎಸ್‌ಇಎನ್ 97 ದಿನಾಂಕ: 5.10.2001
3. ವಿಚಾರಣಾಧಿಕಾರಿಯ ವರದಿ ದಿನಾಂಕ: 7.2.2004
4. ಸರ್ಕಾರದ 2ನೇ ಕಾರಣ ಕೇಳುವ ನೋಟೀಸ್ ಸಿಆಸುಇ 42 ಎಸ್‌ಇಎನ್ 97 ದಿನಾಂಕ: 24.4.2004
5. ಶ್ರೀ ಇ. ಕೃಷ್ಣನಾರಾಯಣ ಇವರ ಲಿಖಿತ ಉತ್ತರ ದಿನಾಂಕ: 13.7.2004
6. ಕರ್ನಾಟಕ ಲೋಕ ಸೇವಾ ಆಯೋಗದ ಪತ್ರ ಸಂಖ್ಯೆ: ಪಿಎಸ್‌ಸಿ 60 ಸಿಎನ್‌ಎಸ್ 2004 ದಿನಾಂಕ: 4.9.2004

**ಪ್ರಸ್ತಾವನೆ:**

ಶ್ರೀ ಇ. ಕೃಷ್ಣನಾರಾಯಣ, ನಿವೃತ್ತ ನಿರ್ದೇಶಕರು, ಸರ್ಕಾರಿ ಮುದ್ರಣಾಲಯ ಇವರು ನಿರ್ದೇಶಕರಾಗಿ ಕಾರ್ಯನಿರ್ವಹಿಸುತ್ತಿದ್ದ ಅವಧಿಯಲ್ಲಿ ಮುದ್ರಣಾಲಯದ ವಿವಿಧ 31 ನೌಕರರ ಶಿಸ್ತು ಪ್ರಕರಣಗಳಲ್ಲಿ ಅವರುಗಳ ವಿರುದ್ಧ ವಿಚಾರಣೆ ಪೂರ್ತಿಗೊಂಡು ದಂಡನೆಯನ್ನು ವಿಧಿಸಿರುವ ಪ್ರಕರಣಗಳನ್ನು ಪುನರ್ ಸಮೀಕ್ಷಿಸಿ ಆದೇಶಗಳನ್ನು ನಿಯಮಬಾಹಿರವಾಗಿ ಹೊರಡಿಸಿರುವುದನ್ನೂ ಒಳಗೊಂಡಂತೆ ವಿಚಾರಣಾ ಹಂತದಲ್ಲಿರುವ ಅನೇಕ ಪ್ರಕರಣಗಳಲ್ಲಿ ಶಿಸ್ತು ಪ್ರಾಧಿಕಾರಿಯ ಹಂತದಲ್ಲಿ ಏಕ ಪಕ್ಷೀಯ ನಿರ್ಣಯಗಳನ್ನು ತೆಗೆದುಕೊಂಡು ದಂಡನೆಗಳನ್ನು ವಿಧಿಸಿರುವ ನಿಯಮ ಬಾಹಿರ ಕ್ರಮಗಳ ದುರ್ನಡತೆಗಾಗಿ ಇವರ ವಿರುದ್ಧ ಮೇಲೆ ಉಲ್ಲೇಖ (1) ರಲ್ಲಿ ಓದಲಾದ ನೋಟೀಸ್‌ನಲ್ಲಿ ಇವರ ವಿರುದ್ಧ 31 ಆರೋಪಗಳನ್ನು ಹೊರಿಸಿ ಸಮಜಾಯಿಷಿಯನ್ನು ಕೇಳಲಾಗಿತ್ತು. ಈ ಎಲ್ಲಾ ಆರೋಪಗಳನ್ನು ಆಪಾದಿತರು ನಿರಾಕರಿಸಿರುವ ಹಿನ್ನೆಲೆಯಲ್ಲಿ ಆರೋಪಗಳ ಸತ್ಯಾಸತ್ಯತೆಯನ್ನು ಕಂಡುಕೊಳ್ಳುವ ದೃಷ್ಟಿಯಿಂದ ಮೇಲೆ ಉಲ್ಲೇಖ (2)ರಲ್ಲಿ ಓದಲಾದ ಆದೇಶ ದಿನಾಂಕ 5.10.2001 ರಲ್ಲಿ ಅಡಿಷನಲ್ ರಿಜಿಸ್ಟ್ರಾರ್, ವಿಚಾರಣೆಗಳು-4, ಕರ್ನಾಟಕ ಲೋಕಾಯುಕ್ತ ಕಚೇರಿ, ಬೆಂಗಳೂರು ಇವರನ್ನು ವಿಚಾರಣಾಧಿಕಾರಿಯನ್ನಾಗಿ ನೇಮಿಸಲಾಗಿತ್ತು. ವಿಚಾರಣೆಯನ್ನು ಪೂರ್ತಿಗೊಳಿಸಿದ ವಿಚಾರಣಾಧಿಕಾರಿಯು ಮೇಲೆ ಉಲ್ಲೇಖ (3)ರಲ್ಲಿ ಓದಲಾದ ಪತ್ರದ ಮೂಲಕ ವಿಚಾರಣಾ ವರದಿಯನ್ನು ಸರ್ಕಾರಕ್ಕೆ ಸಲ್ಲಿಸಿರುತ್ತಾರೆ. ಸದರಿ ವಿಚಾರಣಾ ವರದಿಯ ಪ್ರಕಾರ ಉಲ್ಲೇಖ (1)ರಲ್ಲಿ ಹೊರಿಸಲಾದ ಆರೋಪ ಸಂಖ್ಯೆ: 1, 2, 5 ರಿಂದ 15, 22, 24, 26 30 ಮತ್ತು 31 ರಲ್ಲಿನ ಆಪಾದನೆಗಳು ದೃಢಪಟ್ಟಿವೆಯೆಂದು ಹಾಗೂ ಆಪಾದನೆ ಸಂಖ್ಯೆ: 3, 4, 16 ರಿಂದ 21, 23, 25, 27, 28, 29 ಆಪಾದನೆಗಳು ರುಜುವಾತಾಗಿಲ್ಲವೆಂದು ವರದಿ ನೀಡಿರುತ್ತಾರೆ. ಈ ವರದಿಯನ್ನು ಪರಿಶೀಲಿಸಿದ ಶಿಸ್ತು ಪ್ರಾಧಿಕಾರ ಉಲ್ಲೇಖ (4)ರಲ್ಲಿನ ನೋಟೀಸ್‌ನಲ್ಲಿ ಸದರಿ ವಿಚಾರಣಾ ವರದಿಯನ್ನು ಆಪಾದಿತರಿಗೆ ಒದಗಿಸಿ ಅವರು ಸದರಿ ವರದಿಯ ಬಗ್ಗೆ ಹೇಳಬಯಸುವುದನ್ನು ಮನವಿ ಮಾಡಿಕೊಳ್ಳಲು ಅವಕಾಶವನ್ನು ನೀಡಿತ್ತು. ಉಲ್ಲೇಖ (5)ರಲ್ಲಿನ ಲಿಖಿತ ಉತ್ತರದಲ್ಲಿ ಆಪಾದಿತ ಅಧಿಕಾರಿಯು ವಿವರಣೆಯನ್ನು ಸಲ್ಲಿಸುತ್ತಾ ಅವರು ಯಾವುದೇ ದುರ್ನಡತೆಯನ್ನು ಎಸಗಿಲ್ಲವೆಂದು ವಿಚಾರಣಾಧಿಕಾರಿಗಳು ವರದಿ ನೀಡಿದ್ದರ ಮೇರೆಗೆ ವಿವಿಧ ಪ್ರಕರಣಗಳಲ್ಲಿ ಶಿಸ್ತು ಪ್ರಾಧಿಕಾರಿಯ ಅಧಿಕಾರದಡಿ ಸೂಕ್ತ ನಿರ್ಣಯಗಳನ್ನು ತೆಗೆದುಕೊಂಡಿರುತ್ತೇನೆಂದು, ಈ ಪ್ರಕರಣಗಳಲ್ಲಿ ಅವರು ತೆಗೆದುಕೊಂಡ ನಿರ್ಣಯಗಳೆಲ್ಲವೂ ಅವರ ಸೇವೆಯ ಅಂತ್ಯ ಕಾಲದಲ್ಲಿ ಮಾಡಿರುವುದರಿಂದ ಈ ಎಲ್ಲ ಕ್ರಮಗಳಿಗೆ ಸರ್ಕಾರವು ತಡೆ ಆಜ್ಞೆ ನೀಡಿರುವುದರಿಂದ ಮತ್ತು ನಿವೃತ್ತಿ ನಂತರ ಹಲವಾರು ಪ್ರಕರಣಗಳಲ್ಲಿ ಸರ್ಕಾರವು ವಿಚಾರಣೆಗಳನ್ನು ಕೈಬಿಟ್ಟ ಪ್ರಕರಣಗಳನ್ನು ಉಲ್ಲೇಖಿಸುತ್ತಾ ಅವರ ವಿರುದ್ಧದ ವಿಚಾರಣೆಯನ್ನೂ ಸಹ ಕೈಬಿಡಬೇಕೆಂದು ಮನವಿ ಮಾಡಿದ್ದಾರೆ. ಈ ವಿವರಣೆಯನ್ನು ಪರಿಶೀಲಿಸಲಾಗಿ ಇವರ ಈ ಎಲ್ಲಾ ಅಹವಾಲನ್ನು ವಿಚಾರಣಾಧಿಕಾರಿಯ ಮುಂದೆಯೂ ಮಂಡಿಸಿದ್ದು ಅವರ ರಕ್ಷಣಾ ಹೇಳಿಕೆಯಲ್ಲಿ ಯಾವುದೇ ಹೊಸ ಅಂಶಗಳಿಲ್ಲದಿರುವುದನ್ನು ಮನಗಂಡು ಇವರು ನಿವೃತ್ತರಾಗಿರುವುದರಿಂದ ಮತ್ತು ಈಗಾಗಲೇ ಇವರ ನಿವೃತ್ತಿ ವೇತನವನ್ನು ಕಡಿಮೆಗೊಳಿಸಿರುವ ನಿವೃತ್ತಿ ವೇತನದ ಪೈಕಿ ಶೇಕಡ 50 ನಿವೃತ್ತಿ ವೇತನವನ್ನು ಶಾಶ್ವತವಾಗಿ ಕಡಿತಗೊಳಿಸಲು ಉದ್ದೇಶಿಸಿ ಲೋಕ ಸೇವಾ ಆಯೋಗದ ಸಹಮತಿಯನ್ನು ಕೋರಿದ್ದರ ಮೇರೆಗೆ ಉಲ್ಲೇಖ (6)ರಲ್ಲಿ ಓದಲಾದ ಪತ್ರದಲ್ಲಿ ಲೋಕ ಸೇವಾ ಆಯೋಗವು ತನ್ನ ಸಹಮತಿಯನ್ನು ನೀಡಿರುತ್ತದೆ.

ಮೇಲ್ಕಂಡ ಎಲ್ಲಾ ವಾಸ್ತವಾಂಶಗಳನ್ನು ಪರಿಶೀಲಿಸಿ ಸರ್ಕಾರವು ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರಿ ಆದೇಶ ಸಂಖ್ಯೆ: ಸಿಆಸುಇ 42 ಎಸ್‌ಇಎನ್ 97, ಬೆಂಗಳೂರು 5ನೇ ಅಕ್ಟೋಬರ್ 2004**

ಶ್ರೀ ಇ. ಕೃಷ್ಣನಾರಾಯಣ, ನಿವೃತ್ತ ನಿರ್ದೇಶಕರು, ಸರ್ಕಾರಿ ಮುದ್ರಣಾಲಯ ಇವರ ವಿರುದ್ಧ ಆರೋಪಿಸಲಾದ 31 ಆರೋಪಗಳ ಪೈಕಿ 18 ಆರೋಪಗಳು ದೃಢಪಟ್ಟಿರುವ ಹಿನ್ನೆಲೆಯಲ್ಲಿ ಕರ್ನಾಟಕ ನಾಗರೀಕ ಸೇವಾ ನಿಯಮಾವಳಿಯ ನಿಯಮ 214 ರಡಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಇವರಿಗೆ ಈಗಾಗಲೇ ಕಡಿತಗೊಳಿಸಿ ನಿಗದಿಪಡಿಸಿರುವ ನಿವೃತ್ತಿ ವೇತನದ ಪೈಕಿ ಶೇಕಡಾ 50 ರಷ್ಟು ನಿವೃತ್ತಿ ವೇತನವನ್ನು ಶಾಶ್ವತವಾಗಿ ಕಡಿತಗೊಳಿಸಬೇಕೆಂದು ಈ ಮೂಲಕ ಆದೇಶಿಸಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎಚ್. ಆರ್. ನಾಗೇಂದ್ರ**

ಪಿ.ಆರ್.1144 ಸರ್ಕಾರದ ಅಧೀನ ಕಾರ್ಯದರ್ಶಿ, ಸಿಆಸುಇ (ಸೇವೆಗಳು-3).

**ಕಂದಾಯ ಸಚಿವಾಲಯ**

**ವಿಷಯ :** ಶ್ರೀ ಸೈಯದ್‌ಗೌಸ್ ಮೊಹಿದ್ದೀನ್, ನಿವೃತ್ತ ತಹಶೀಲ್ದಾರ್ ಇವರ ವಿರುದ್ಧ ಇಲಾಖಾ ವಿಚಾರಣೆ ಜರುಗಿಸುವ ಬಗ್ಗೆ.

**ಸರ್ಕಾರದ ಆದೇಶ ಸಂ: ಆರ್‌ಡಿ 36 ಎಡಿಇ 2001, ಬೆಂಗಳೂರು, ದಿನಾಂಕ: 6ನೇ ಅಕ್ಟೋಬರ್ 2004**

ಶ್ರೀ ಸೈಯದ್ ಗೌಸ್ ಮೊಹಿದ್ದೀನ್, ನಿವೃತ್ತ ತಹಶೀಲ್ದಾರ್ ಆದ ನಿಮ್ಮನ್ನು ಸರ್ಕಾರಿ ಅಧಿಸೂಚನೆ ಸಂಖ್ಯೆ: ಕಂಇ 50 ಎಟಿಎಸ್ 97, ದಿನಾಂಕ: 11.2.98 ರನ್ವಯ ಕೃಷ್ಣಾ ಮೇಲ್ದಂಡೆ ಯೋಜನೆ, ಬಾಗಲಕೋಟೆ ಇಲ್ಲಿಗೆ ವಿಶೇಷ ತಹಶೀಲ್ದಾರ್ ಎಂದು ನೇಮಕ ಮಾಡಲಾಗಿತ್ತು. ಆದರೆ, ಸದರಿ ಹುದ್ದೆಯಲ್ಲಿ ನೀವು ಕರ್ತವ್ಯಕ್ಕೆ ಹಾಜರಾಗದೇ ಸುಮಾರು 10 ತಿಂಗಳುಗಳವರೆಗೆ ಸರ್ಕಾರಕ್ಕೆ ಯಾವುದೇ ಕಾರಣಗಳನ್ನೂ ತಿಳಿಸದೆ ಅನಧಿಕೃತವಾಗಿ ಗೈರು ಹಾಜರಾಗಿರುವುದು ಒಬ್ಬ ಸರ್ಕಾರಿ ನೌಕರನಿಗೆ ತಕ್ಕದ್ದಲ್ಲದ ವರ್ತನೆಯಿಂದಾಗಿ ಇಂತಹ ಕರ್ತವ್ಯ ಚ್ಯುತಿಯ ಬಗ್ಗೆ ಶ್ರೀ ಸೈಯದ್ ಗೌಸ್ ಮೊಹಿದ್ದೀನ್, ನಿವೃತ್ತ ತಹಶೀಲ್ದಾರ್ ಇವರ ವಿರುದ್ಧ ಶಿಸ್ತು ಕ್ರಮ ಪ್ರಾರಂಭಿಸಬೇಕೆಂದು ಸರ್ಕಾರ ಭಾವಿಸುತ್ತದೆ.

ಆದುದರಿಂದ, ಕರ್ನಾಟಕ ನಾಗರೀಕ ಸೇವಾ ನಿಯಮಾವಳಿಗಳ ನಿಯಮ 214 ರಡಿಯಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಸರ್ಕಾರವು ಶ್ರೀ ಸೈಯದ್ ಗೌಸ್ ಮೊಹಿದ್ದೀನ್, ನಿವೃತ್ತ ತಹಶೀಲ್ದಾರ್ ಇವರ ವಿರುದ್ಧ ಮೇಲೆ ಹೇಳಿದ ಆರೋಪಗಳ ಬಗ್ಗೆ ಇಲಾಖಾ ವಿಚಾರಣೆ ನಡೆಸಬೇಕೆಂದು ಹಾಗೂ ಈ ವಿಚಾರಣೆಯಲ್ಲಿ 1957ರ ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಾವಳಿಗಳ ನಿಯಮ 11 ಮತ್ತು 11-ಎ ರಲ್ಲಿ ನಿಗದಿಪಡಿಸಿರುವ ಕಾರ್ಯವಿಧಾನವನ್ನು ಅನುಸರಿಸಬೇಕೆಂದು ಈ ಮೂಲಕ ಆದೇಶಿಸುತ್ತದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್.1153

**ಎಂ. ಎಸ್. ಮಹಂತೇಶಯ್ಯ**

ಸರ್ಕಾರದ ಅಧೀನ ಕಾರ್ಯದರ್ಶಿ, ಕಂದಾಯ ಇಲಾಖೆ (ಸೇವೆಗಳು-3).

**INFRASTRUCTURE DEVELOPMENT SECRETARIAT**

**Sub :** Construction of Road Over Bridge/ Road Under Bridge (ROB/RUB's) in Karnataka Deletion of L.C. No. 49 at Shimoga from the Sanctioned list-orders.

**Read :**
1. G.O. No. IDD 5 NSW 2000, dated: 8/9th June 2000.
2. Proceedings of the Steering Committee on construction of ROB/RUB held on 29.3.2004
3. Letter No. CBS/21/BRG/ROB/LC-49:2 KMS-3- Road SMG:03-04, dated: 13.05.2004, of the Chief Engineer, (C&B) South, Bangalore.
4. Letter No. W. 352/CN/BNC/ROB/RUB/ SMET/LC No. 49, dated: 19.2.2004, from the CE (Construction) SWR, Bangalore.

**Preamble:**

In the Government Order read at (1) above, the Government of Karnataka had accorded sanction for construction of number of ROB/RUB's in the State L.C. No. 49 at Shimoga was also one of them.

Recently. the public of Shimoga Town have brought to the notice of Government that the proposal for construction of ROB at L.C. No. 49 at Shimoga may not be very useful because the train traffic at this gate is very low and has suggested to construct an ROB at L.C. No. 46 at NH 13. The Steering Committee constituted for over seeing the construction of ROB/RUB's in its meeting held on 29.3.2004 has noted this and instructed the Chief Engineer, (South) (C&B) to review the matter and submit his report.

The Chief Engineer (C&B) South, Bangalore in the letter cited at (3) above has also opined that construction of ROB at LC No. 49 at Shimoga is not necessary as the traffic density is less He has also opined that construction of a ROB at LC No. 46 at NH 13 is quite essential.

The matter has been examined in detail and the following orders are issued.

**Government Order No. IDD 38 NSW 2002, Bangalore dated: 11th October 2004**

In the circumstances explained in the preamble, the Government hereby orders that the work of construction of ROB at LC No. 49 at Shimoga shall be deleted from the works sanctioned in Annexure-II to the Government Order No. IDD 5 NSW 2000, dated: 8/9th June 2000.

By Order and in the name of the Governor of Karnataka,

**T. B. RENUKAPRASAD**

PR-1154

Under Secretary to Government,
Infrastructure Development Department.

**ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಸಚಿವಾಲಯ**

**ವಿಷಯ :** ರಾಜ್ಯ ವಲಯದಿಂದ ಜಿಲ್ಲಾ ವಲಯಕ್ಕೆ ವಸತಿ ಶಾಲೆಗಳ ನಿಯಂತ್ರಣವನ್ನು ವರ್ಗಾಯಿಸುವ ಬಗ್ಗೆ- ಜಿಲ್ಲಾ ಪಂಚಾಯಿತಿಗಳಿಗೆ ಅಧಿಕಾರವನ್ನು ಪ್ರತ್ಯಾಯೋಜಿಸುವುದು.

**ಓದಲಾಗಿದೆ :** 1. ಸರ್ಕಾರದ ಅಧಿಸೂಚನೆ ಸಂಖ್ಯೆ: ಗ್ರಾಅಪ 121 ಜಿಪಸ 98, ದಿನಾಂಕ: 28.11.1998

**ಪ್ರಸ್ತಾವನೆ:**

1993 ರ ಕರ್ನಾಟಕ ಪಂಚಾಯತ್ ರಾಜ್ ಅಧಿನಿಯಮದ ಅನುಸೂಚಿ 3ರ ಉಪಬಂಧ XXIIರಲ್ಲಿ ಜಿಲ್ಲೆಯಲ್ಲಿನ ವಿದ್ಯಾರ್ಥಿ ನಿಲಯಗಳ ಮೇಲ್ವಿಚಾರಣೆ ಮತ್ತು ನಿರ್ವಹಣೆ, ವ್ಯಕ್ತಿಗಳಿಗೆ ಅನುದಾನಗಳ, ಸಾಲಗಳ ಮತ್ತು ಸಹಾಯಧನಗಳ ಹಂಚಿಕೆ ಮತ್ತು ಅನುಸೂಚಿತ ಜಾತಿ ಮತ್ತು ಪಂಗಡಗಳು ಮತ್ತು ಹಿಂದುಳಿದ ವರ್ಗಗಳ ಕಲ್ಯಾಣಕ್ಕಾಗಿ ಇತರ ಯೋಜನೆಗಳನ್ನು ನಿರ್ವಹಿಸುವ ವಿಷಯ ಒಳಗೊಂಡಿರುತ್ತದೆ. ಮೇಲೆ ಓದಲಾದ ಸರಕಾರದ ಅಧಿಸೂಚನೆಯಲ್ಲಿ ಜಿಲ್ಲಾ ಪಂಚಾಯಿತಿಗಳು ವಸತಿ ಶಾಲೆ, ನವೋದಯ ಮಾದರಿಯ ಶಾಲೆ ಕಾಲೇಜು ವಿದ್ಯಾರ್ಥಿಗಳಿಗೆ ಪುರಸ್ಕಾರದ ಹಣ ಇತ್ಯಾದಿ ಯೋಜನೆಗಳನ್ನು ನಿರ್ವಹಿಸುವ ಕುರಿತು ಆದೇಶಿಸಲಾಗಿದೆ. ರಾಜ್ಯದಲ್ಲಿ ಅನುಸೂಚಿತ ಜಾತಿ ವಿದ್ಯಾರ್ಥಿಗಳಿಗಾಗಿ 47 ಮೊರಾರ್ಜಿ ದೇಶಾಯಿ ವಸತಿ ಶಾಲೆಗಳು ಮತ್ತು 4 ನವೋದಯ ಮಾದರಿಯ ವಸತಿ ಶಾಲೆಗಳಿವೆ. ಈ ಶಾಲೆಗಳನ್ನು ಜಿಲ್ಲಾ ಪಂಚಾಯಿತಿಗಳು ನಿರ್ವಹಿಸುತ್ತಿರುತ್ತವೆ. ಸಮಾಜ ಕಲ್ಯಾಣ ಇಲಾಖೆಯವರು ಈ ವಸತಿ ಶಾಲೆಗಳನ್ನು ನಿರ್ವಹಿಸಲು ಕರ್ನಾಟಕ ವಸತಿ ಶಿಕ್ಷಣ ಸಂಸ್ಥೆಗಳ ಸಂಘವನ್ನು ರಚಿಸಿರುತ್ತಾರೆ.

ಪಂಚಾಯತ್ ರಾಜ್ ಅಧಿನಿಯಮಕ್ಕೆ ಅಗತ್ಯ ತಿದ್ದುಪಡಿಯನ್ನು ಮಾಡದೆ ಪಂಚಾಯತ್ ರಾಜ್ ಸಂಸ್ಥೆಗಳ ಅಧಿಕಾರಗಳನ್ನು ಚಲಾಯಿಸುವ ಬೇರೆ ಯಾವುದೇ ಕಾಯಿದೆ ಕಾನೂನಿನನ್ವಯ ನಗಣ್ಯವಾಗುತ್ತದೆ. ಈ ಹಿನ್ನೆಲೆಯಲ್ಲಿ ಸಭೆ ನಡೆದು ವಸತಿ ಶಾಲೆಗಳ ಮೇಲ್ವಿಚಾರಣೆಯನ್ನು ಜಿಲ್ಲಾ ಪಂಚಾಯ್ತಿಯ ವ್ಯಾಪ್ತಿಯಲ್ಲಿರುವಂತೆ ಯಥಾಸ್ಥಿತಿಯನ್ನು ಮುಂದುವರೆಸಿಕೊಂಡು ಹೋಗುವಂತೆ ತೀರ್ಮಾನಿಸಲಾಗಿದೆ. ಇದಕ್ಕೆ ಸಮಾಜ ಕಲ್ಯಾಣ ಇಲಾಖೆಯ ಸಹಮತಿ ಇರುತ್ತದೆ.

ಕರ್ನಾಟಕ ಪಂಚಾಯತ್ ರಾಜ್ ಅಧಿನಿಯಮ 16ನೇ ಅಧ್ಯಾಯದಲ್ಲಿ ಪರಿವೀಕ್ಷಣೆ, ಮೇಲ್ವಿಚಾರಣೆ ಇತ್ಯಾದಿ ಎಂಬ ಶೀರ್ಷಿಕೆಯಡಿ ಪ್ರಕರಣ 233 ರಲ್ಲಿ ಜಾರಿಗೊಳ್ಳುತ್ತಿರುವ ಯೋಜನೆಗಳ ಬಗ್ಗೆ ಇಲಾಖೆ ಮುಖ್ಯಸ್ಥರು ಪರಿವೀಕ್ಷಣೆ ಮಾಡಿ ಸಂಬಂಧಿಸಿದವರಿಗೆ ವರದಿ ಸಲ್ಲಿಸಲು ಅವಕಾಶವಿದೆ. ವಸತಿ ಶಾಲೆಗಳ ಮೇಲ್ವಿಚಾರಣೆಯನ್ನು ಶಾಸನಬದ್ಧವಾಗಿ ಪಂಚಾಯತ್ ರಾಜ್ ಸಂಸ್ಥೆಗಳಿಗೆ ವಹಿಸಲಾಗಿದೆ. ಕಾನೂನಿನನ್ವಯ ಪಂಚಾಯತ್ ರಾಜ್ ಸಂಸ್ಥೆಗಳ ನಿಯಂತ್ರಣದಲ್ಲಿರುವ ಎಲ್ಲಾ ವಸತಿ ಶಾಲೆಗಳ ನಿಯಂತ್ರಣವನ್ನು ಪೂರ್ವ ಯಥಾಸ್ಥಿತಿಯಂತೆ ಮುಂದುವರೆಸುವ ಬಗ್ಗೆ ಮತ್ತು ಕರ್ನಾಟಕ ವಸತಿ ಶಿಕ್ಷಣ ಸಂಸ್ಥೆಗಳ ಸಂಘವನ್ನು ರದ್ದುಪಡಿಸುವ ಬಗ್ಗೆ ಸರ್ಕಾರದ ಮಟ್ಟದಲ್ಲಿ ಸಮಗ್ರವಾಗಿ ಪರಿಶೀಲಿಸಲಾಯಿತು.

**ಸರ್ಕಾರದ ಆದೇಶ ಸಂಖ್ಯೆ: ಗ್ರಾಅಪ 209 ತಾಪಸ 2003, ಬೆಂಗಳೂರು ದಿನಾಂಕ: 5ನೇ ಅಕ್ಟೋಬರ್ 2004**

ಮುಂದಿನ ಶೈಕ್ಷಣಿಕ ವರ್ಷದಿಂದ ಎಲ್ಲಾ ವಸತಿ ಶಾಲೆಗಳನ್ನು ರಾಜ್ಯ ವಲಯದಿಂದ ಜಿಲ್ಲಾ ವಲಯಕ್ಕೆ ವರ್ಗಾಯಿಸುವ ಬಗ್ಗೆ ಆದೇಶಿಸಿದೆ. ಆದಾಗ್ಯೂ ಹಾಲಿ ಇರುವ ವ್ಯವಸ್ಥೆಯು ಪ್ರಸಕ್ತ ಶೈಕ್ಷಣಿಕ ವರ್ಷದಲ್ಲಿ ಮುಂದುವರಿಯುತ್ತದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಕೆ. ಎಸ್. ಶ್ಯಾಮಸುಂದರ**

ಪಿ.ಆರ್.1157

ಸರ್ಕಾರದ ಅಧೀನ ಕಾರ್ಯದರ್ಶಿ,

ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಇಲಾಖೆ.

**ಕಾನೂನು ಸಚಿವಾಲಯ**

**ತಿದ್ದುಪಡಿ ಸೇರ್ಪಡೆ ಆದೇಶ ಸಂಖ್ಯೆ: ಲಾ 108 ಎಲ್‌ಸಿಇ 2003 ಬೆಂಗಳೂರು, ದಿನಾಂಕ: 26ನೇ ಜುಲೈ 2004**

ಸರ್ಕಾರಿ ಆದೇಶ ಸಂಖ್ಯೆ: ಲಾ 108 ಎಲ್‌ಸಿಇ 2003, ದಿನಾಂಕ: 23.12.2003ರ ಪುಟ-2 ರ ಆದೇಶ ಭಾಗದ (ಅ)ದಲ್ಲಿ "ಶೋರಾಪುರ ಮತ್ತು ಗೋಕಾಕದಲ್ಲಿ ಸಿವಿಲ್ ಜಡ್ಜ್ (ಹಿರಿಯ ವಿಭಾಗ) ನ್ಯಾಯಾಲಯಗಳು" ಎಂದಿರುವುದನ್ನು "ಶೋರಾಪುರದಲ್ಲಿ ಸಿವಿಲ್ ಜಡ್ಜ್ (ಹಿರಿಯ ವಿಭಾಗ) ನ್ಯಾಯಾಲಯ' ಎಂದು, ಗೋಕಾಕ್‌ನಲ್ಲಿ ಹೆಚ್ಚುವರಿ ಸಿವಿಲ್ ನ್ಯಾಯಾಧೀಶರು (ಹಿರಿಯ ಶ್ರೇಣಿ) ನ್ಯಾಯಾಲಯ ಎಂದು ತಿದ್ದಿ ಓದಿಕೊಳ್ಳತಕ್ಕದ್ದು

ಗೋಕಾಕ್‌ನ ಹೆಚ್ಚುವರಿ ಸಿವಿಲ್ ನ್ಯಾಯಾಧೀಶರು (ಹಿರಿಯ ಶ್ರೇಣಿ) ನ್ಯಾಯಾಲಯಕ್ಕೆ ಮಂಜೂರಾದ ಹುದ್ದೆಗಳು

| | ಹುದ್ದೆಯ ಹೆಸರು | | ಸಂಖ್ಯೆ |
|---|---|---|---|
| 1) | ಸಿವಿಲ್ ಜಡ್ಜ್ (ಹಿರಿಯ ವಿಭಾಗ) | - | 1 |
| 2) | ಶೀಘ್ರಲಿಪಿಗಾರರು | - | 1 |
| 3) | ಪ್ರಥಮದರ್ಜೆ ಸಹಾಯಕರು | - | 1 |
| 4) | ಬೆರಳಚ್ಚುಗಾರರು | - | 1 |
| 5) | ಅಟೆಂಡರ್ಸ್ | - | 1 |
| 6) | ಪ್ಯೂನ್ಸ್ | - | 2 |
| | | ಒಟ್ಟು | 7 |

ಈ ವೆಚ್ಚವನ್ನು ಲೆಕ್ಕಶೀರ್ಷಿಕೆ "2014 ನ್ಯಾಯಪರಿಪಾಲನೆ-00-105- ವ್ಯವಹಾರ ಮತ್ತು ಸತ್ರ ನ್ಯಾಯಾಲಯಗಳು-0-01-ಸಿಬ್ಬಂದಿವೆಚ್ಚ-125-ಆಧುನೀಕರಣ-ಯೋಜನೇತರ" ಇದರ ಅಡಿ ಭರಿಸತಕ್ಕದ್ದು.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎ. ಪಿ. ರಾಮಕೃಷ್ಣ**

ಪಿ.ಆರ್.1158

ಸರ್ಕಾರದ ಅಧೀನ ಕಾರ್ಯದರ್ಶಿ (ಪ್ರಭಾರ), ಕಾನೂನು ಇಲಾಖೆ (ಆಡಳಿತ-1).

**ENERGY SECRETARIAT**

**Subject :** Karnataka Electricity Regulatory Commission-Release of Second quarter Fund to KERC out of the provision made in the Budget Estimates for the year 2004-05. Orders reg.

**Read :** 1. Letter No. F/01/1/1472 dated: 2.9.2004.

**PREAMBLE:**

A sum of Rs. 320.50 lakhs has been provided in the Budget estimates for the year 2004-05 under the Head of Account 2801-80-101-1-07-KERC-101-GIA (Non-Plan). In the letter dated 2.9.2004 read above, Secretary, KERC has requested to recoup the Permanent Imprest by releasing Rs. 50.91 lakhs to meet the expenditures in the Second quarter of the year 2004-2005 (based on actual expenditure) in order to maintain the balance of Rs. 75 lakhs in the Permanent Imprest Account sanctioned vide G.O. dated 19.10.2002 Hence, this order.

**Government Order No. DE 30 PSR 2001 Bangalore, dated: 12th October 2004**

In the circumstances explained in the preamble, Government are pleased to release, the amount of Rs. 50.91 lakhs (Rupees Fifty Lakhs Ninety One Thousand Only) based on the actual expenditure incurred by the Karnataka Electricity Regulatory Commission (KERC) under the Head of Account "2801-80-101-1-07-KERC-101-GIA (Non-Plan)" to meet the expenditure for the Second (II) Quarter of the year 2004-05 and to maintain the balance of Rs. 75 lakhs in the Permanent Imprest Account.

The Principal Secretary to Government Energy Department is authorised to countersign the bill and to draw and disburse the amount to KERC on the payees receipt signed and submitted by the Secretary, KERC.

This Order issues with the concurrence of the Finance Department vide their U.O. Note No. FD/ 1725/Exp-1/2004 dated: 5.10.2004.

By Order and in the name of the Governor of Karnataka,

PR-1159

**K. L. JAYARAM**

Under Secretary to Government, Energy Department.

**ಶಿಕ್ಷಣ ಸಚಿವಾಲಯ**

**ವಿಷಯ :** ಸಾರ್ವಜನಿಕ ಶಿಕ್ಷಣ ಇಲಾಖೆ ಉತ್ತರ ಕರ್ನಾಟಕದ ಆಯುಕ್ತಾಲಯಗಳ ಹುದ್ದೆಗಳನ್ನು 01.04.2004 ರಿಂದ ಮುಂದುವರಿಸುವ ಬಗ್ಗೆ.

**ಓದಲಾಗಿದೆ :** 1. ಸರ್ಕಾರಿ ಆದೇಶ ಸಂಖ್ಯೆ: ಇಡಿ 163 ಯೋಯೋಕಾ 2003, ದಿನಾಂಕ: 10.11.2003 (ಇಡಿ 151 ಸ್ಕೀಮರ ಯೂನಿಕ್) 2003 ದಿನಾಂಕ: 10.11.2003.

**ಪ್ರಸ್ತಾವನೆ:**

ಸಾರ್ವಜನಿಕ ಶಿಕ್ಷಣ ಇಲಾಖೆಯ ಗುಲ್ಬರ್ಗಾ ಹಾಗೂ ಧಾರವಾಡ ವಿಭಾಗಗಳ ಆಯುಕ್ತಾಲಯಗಳಿಗೆ ಮೇಲೆ ಓದಲಾದ ದಿನಾಂಕ: 10.11.2003ರ ಸರ್ಕಾರಿ ಆದೇಶದಲ್ಲಿ ಖಾಯಂ ಹುದ್ದೆಗಳನ್ನು ಮಂಜೂರು ಮಾಡಲಾಯಿತು. ಈ ಹುದ್ದೆಗಳನ್ನು 1.4.2004 ರಿಂದ ಮುಂದುವರಿಸುವ ಪ್ರಸ್ತಾವನೆಯನ್ನು ಪರಿಶೀಲಿಸಿದ ಸರ್ಕಾರವು ಈ ಹುದ್ದೆಗಳನ್ನು ಮುಂದುವರಿಸಲು ತೀರ್ಮಾನಿಸಿ ಮುಂದಿನಂತೆ ಆದೇಶಿಸುತ್ತದೆ.

**ಸರ್ಕಾರಿ ಆದೇಶ ಸಂಖ್ಯೆ: ಇಡಿ 163 ಯೋಯೋಕಾ 2003, ಬೆಂಗಳೂರು ದಿನಾಂಕ: 12ನೇ ಅಕ್ಟೋಬರ್ 2004**
**(ಇಡಿ 52 ಸ್ಕೀಮರ (ಯೂನಿಕ್) 2004, ದಿನಾಂಕ: 12.10.2004)**

ಸರ್ಕಾರವು ಸಾರ್ವಜನಿಕ ಶಿಕ್ಷಣ ಇಲಾಖೆಯ ಧಾರವಾಡ ಹಾಗೂ ಗುಲ್ಬರ್ಗಾದಲ್ಲಿರುವ ಆಯುಕ್ತಾಲಯಗಳ ವ್ಯಾಪ್ತಿಗೆ ಬರುವ ಈ ಆದೇಶದ ಅನುಬಂಧ-1 ಮತ್ತು 2ರಲ್ಲಿ ನಮೂದಿಸಲಾದ ವಿವಿಧ ಪ್ರವರ್ಗಗಳ ಹುದ್ದೆಗಳನ್ನು ತಾತ್ಕಾಲಿಕವಾಗಿ 01.4.2004 ರಿಂದ 31.3.2005ರವರೆಗೆ ಮುಂದುವರಿಸುತ್ತದೆ.

ಈ ಬಗೆಗಿನ ಧಾರವಾಡ ಆಯುಕ್ತಾಲಯದ ವೆಚ್ಚವನ್ನು ಲೆಕ್ಕಶೀರ್ಷಿಕೆ 2202-02-001-0-03-051 ಸಾಮಾನ್ಯ ವೆಚ್ಚಗಳ ಅಡಿಯಲ್ಲೂ ಗುಲ್ಬರ್ಗಾ ಆಯುಕ್ತಾಲಯದ ವೆಚ್ಚವನ್ನು ಲೆಕ್ಕಶೀರ್ಷಿಕೆ 2202-02-001-0-05-051 ಸಾಮಾನ್ಯ ವೆಚ್ಚಗಳ ಅಡಿಯಲ್ಲಿ ಭರಿಸತಕ್ಕದ್ದು.

ಈ ಆದೇಶವನ್ನು ಶಿಕ್ಷಣ ಇಲಾಖೆಯ ಆಂತರಿಕ ಆರ್ಥಿಕ ಸಲಹೆಗಾರರು ಅ.ಟಿ. ಸಂಖ್ಯೆ: ಇಡಿ 652 ಐಎಫ್ (ಬಿಎ) 2004, ದಿನಾಂಕ: 30.9.2004ರಲ್ಲಿ ನೀಡಿರುವ ಸಹಮತಿಯನ್ವಯ ಹೊರಡಿಸಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಕೆ. ಶ್ರೀಕಂಠೇಶ್ವರ**

ವಿಶೇಷಾಧಿಕಾರಿ ಹಾಗೂ ಪದನಿಮಿತ್ತ, ಸರ್ಕಾರದ ಉಪ ಕಾರ್ಯದರ್ಶಿ (ಯೋಜನೆ), ಶಿಕ್ಷಣ ಇಲಾಖೆ.

**ಸರ್ಕಾರಿ ಆದೇಶ ಸಂಖ್ಯೆ: ಇಡಿ 163 ಯೋಯೋಕಾ 2003, ಬೆಂಗಳೂರು ದಿನಾಂಕ: 12.10.2004 ಕ್ಕೆ ಅನುಬಂಧ-1**
**(ಇಡಿ 52 ಸ್ಕೀಮರ (ಯೂನಿಕ್) 2004, ದಿನಾಂಕ: 12.10.2004)**

ಧಾರವಾಡ ಮತ್ತು ಗುಲ್ಬರ್ಗಾ ಸಾರ್ವಜನಿಕ ಶಿಕ್ಷಣ ಆಯುಕ್ತಾಲಯಗಳಲ್ಲಿ ದಿನಾಂಕ: 1.4.2004 ರಿಂದ 31.3.2005 ರವರೆಗೆ ಮುಂದುವರಿಸಲ್ಪಟ್ಟ ಹುದ್ದೆಗಳ ವಿವರ

| ಕ್ರಮಸಂಖ್ಯೆ | ವೃಂದ | ಹುದ್ದೆಗಳ ಸಂಖ್ಯೆ | |
|---|---|---|---|
| | | ಹುಬ್ಬಳ್ಳಿ ಆಯುಕ್ತರ ಕಛೇರಿ | ಗುಲ್ಬರ್ಗಾ ಆಯುಕ್ತರ ಕಛೇರಿ |
| 1. | ಅಪರ ಆಯುಕ್ತರು | 1 | 1 |
| 2. | ನಿರ್ದೇಶಕರು | 1 | - |
| 3. | ಸಹ ನಿರ್ದೇಶಕರು | 1 | 1 |
| 4. | ಉಪ ನಿರ್ದೇಶಕರು | 2 | 1 |
| 5. | ಮುಖ್ಯ ಲೆಕ್ಕಾಧಿಕಾರಿಗಳು | 1 | 1 |
| 6. | ಸಾರ್ವಜನಿಕ ಸಂಪರ್ಕಾಧಿಕಾರಿ | 1 | - |
| 7. | ಕಿರಿಯ ಸಂಶೋಧನಾಧಿಕಾರಿ | 1 | - |
| 8. | ಯೋಜನಾ ಸಹಾಯಕರು | 1 | 1 |
| 9. | ಕಲಾಕಾರರು | 1 | 1 |
| 10. | ಕಂಪ್ಯೂಟರ್ ಅನಾಲಿಸ್ಟ್ | 1 | 1 |
| | ಒಟ್ಟು | 11 | 7 |

**ಕೆ. ಶ್ರೀಕಂಠೇಶ್ವರ**
ವಿಶೇಷಾಧಿಕಾರಿ ಹಾಗೂ ಪದನಿಮಿತ್ತ,
ಸರ್ಕಾರದ ಉಪ ಕಾರ್ಯದರ್ಶಿ (ಯೋಜನೆ), ಶಿಕ್ಷಣ ಇಲಾಖೆ.

**ಸರ್ಕಾರಿ ಆದೇಶ ಸಂಖ್ಯೆ: ಇಡಿ 163 ಯೋಯೋಕಾ 2003, ಬೆಂಗಳೂರು ದಿನಾಂಕ: 12.10.2004 ಕ್ಕೆ ಅನುಬಂಧ-2**
**(ಇಡಿ 52 ಸ್ವೀಮರ (ಯೂನಿಕ್) 2004, ದಿನಾಂಕ: 12.10.2004)**

ಧಾರವಾಡ ಮತ್ತು ಗುಲ್ಬರ್ಗಾ ಆಯುಕ್ತಾಲಯಗಳಲ್ಲಿ ದಿನಾಂಕ: 1.4.2004 ರಿಂದ 31.3.2005 ರವರೆಗೆ ಮುಂದುವರಿಸಲ್ಪಟ್ಟ ಹುದ್ದೆಗಳ ವಿವರ

| ಕ್ರ.ಸಂ. | ವೃಂದ | ಹಾಲಿ ಆಯುಕ್ತರು ಸಾರ್ವಜನಿಕ ಶಿಕ್ಷಣ ಇಲಾಖೆಯಲ್ಲಿ ಲಭ್ಯವಿರುವ ಹುದ್ದೆಗಳು | ಇದರಲ್ಲಿ ಧಾರವಾಡದ ಆಯುಕ್ತಾಲಯಕ್ಕೆ ವರ್ಗಾಯಿಸಲಾದ ಹುದ್ದೆಗಳು | ಗುಲ್ಬರ್ಗಾ ಆಯುಕ್ತಾಲಯಕ್ಕೆ ವರ್ಗಾಯಿಸಲಾದ ಹುದ್ದೆಗಳು |
|---|---|---|---|---|
| 1. | ಹಿರಿಯ ಸಹಾಯಕ ನಿರ್ದೇಶಕರು | 10 | 2 | 2 |
| 2. | ಸಹಾಯಕ ನಿರ್ದೇಶಕರು | 10 | 3 | 2 |
| 3. | ಅಧೀಕ್ಷಕರು (ಲೆಕ್ಕಪತ್ರ ಅಧೀಕ್ಷಕರೂ ಸೇರಿದಂತೆ) ಮತ್ತು ಸಹಾಯಕ ಸಾಂಖ್ಯಿಕ ಅಧಿಕಾರಿ | 2913+32 | 14* | 6* |
| 4. | ಪ್ರಥಮ ದರ್ಜೆ ಸಹಾಯಕರು | 108 | 31* | 15* |
| 5. | ದ್ವಿತೀಯ ದರ್ಜೆ ಸಹಾಯಕರು: ಬೆರಳಚ್ಚುಗಾರರು: ಕಂಪ್ಯೂಟರ್ ಪ್ರೋಗ್ರಾಮರ್‌ಗಳು | 68 | 24* | 11* |
| 6. | ಗುಮಾಸ್ತೆ ಸಹಿತ ಬೆರಳಚ್ಚುಗಾರರು | 8 | 2 | 2 |
| 7. | ದಲಾಯತ್: ಗ್ರೂಪ್ ಡಿ | 42 | 10 | 8 |
| 8. | ಚಾಲಕರು | 12 | 3 | 2 |
| | ಒಟ್ಟು | 298 | 89 | 48 |

**ಗಮನಿಸಿ:**

* ಸಮಾನಾಂತರ ಹುದ್ದೆಗಳಲ್ಲಿ ಅಗತ್ಯವಿರುವಷ್ಟು ಹುದ್ದೆಗಳನ್ನು ಲೆಕ್ಕಪತ್ರ ಅಧೀಕ್ಷಕರು: ಸಹಾಯಕ ಸಾಂಖ್ಯಿಕ ಅಧಿಕಾರಿಗಳು, ಶೀಘ್ರಲಿಪಿಗಾರರು ಹಾಗೂ ಕಂಪ್ಯೂಟರ್ ಪ್ರೋಗ್ರಾಮರ್ ಹುದ್ದೆಗಳಾಗಿ ಪರಿವರ್ತಿಸಲು ಅನುಮೋದನೆ ನೀಡಿದೆ.

**ಕೆ. ಶ್ರೀಕಂಠೇಶ್ವರ**
ವಿಶೇಷಾಧಿಕಾರಿ ಹಾಗೂ ಪದನಿಮಿತ್ತ,
ಪಿ.ಆರ್.1160 ಸರ್ಕಾರದ ಉಪ ಕಾರ್ಯದರ್ಶಿ (ಯೋಜನೆ), ಶಿಕ್ಷಣ ಇಲಾಖೆ.

**INFRASTRUCTURE DEVELOPMENT SECRETARIAT**

**ADDENDUM No. IDD 97 NSW 2003 Bangalore, dated: 15th October 2004**

**Sub :** Release of funds for acqusition of lands for construction of approach for the Road over bridge in lieu of L.C. No. 95 in Pandavapura-Orders.

In the order portion of G.O. No. IDD 97 NSW 2003, dated: 30.8.2004 at para No. 3 after the words Under Secretary to Government, Infrastructure Development Department, the following sentence shall be inserted

"The IDeCK in-turn shall release this amount to the Financial Adviser & Chief Accounts Officer, (Construction), South Western Railway, Bangalore, who in-turn shall remit it to the Assistant Commissioner, (Revenue) Pandavapura, Sub-Division, Pandavapura, for the purpose of Land Acqusition."

By Order and in the name of the Governor of Karnataka,

**T. B. RENUKAPRASAD**

PR-1161 Under Secretary to Government, Infrastructure Development Department.

**ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಸಚಿವಾಲಯ**

**ವಿಷಯ :** ಯೋಜನೆ ಮತ್ತು ಸಾಂಖ್ಯಿಕ ಇಲಾಖೆಯ ಪ್ರಧಾನ ಕಾರ್ಯದರ್ಶಿ ಹುದ್ದೆಯನ್ನು ಅಪರ ಮುಖ್ಯ ಕಾರ್ಯದರ್ಶಿ ಮತ್ತು ಪ್ರಧಾನ ಕಾರ್ಯದರ್ಶಿ ಹುದ್ದೆ ಎಂದು ಉನ್ನತೀಕರಿಸುವ ಬಗ್ಗೆ.

**ಓದಲಾಗಿದೆ :** 1. ಸರ್ಕಾರದ ಅಧಿಸೂಚನೆ ಸಂಖ್ಯೆ: ಡಿಪಿಎಆರ್ 470 ಎಸ್‌ಎಎಸ್ 2004 ದಿನಾಂಕ: 28.8.2004.

**ಪ್ರಸ್ತಾವನೆ:**

ಮೇಲೆ ಕ್ರಮಸಂಖ್ಯೆ (1)ರಲ್ಲಿ ಓದಲಾಗಿರುವ ಅಧಿಸೂಚನೆಯಲ್ಲಿ ಡಾ: ಮಾಲತಿದಾಸ್ ಯೋಜನೆ ಮತ್ತು ಸಾಂಖ್ಯಿಕ ಇಲಾಖೆ ಇವರಿಗೆ ಮುಂಬಡ್ತಿ ನೀಡಿ ಉನ್ನತೀಕರಿಸಿದ ಅಪರ ಮುಖ್ಯ ಕಾರ್ಯದರ್ಶಿ ಹಾಗೂ ಪ್ರಧಾನ ಕಾರ್ಯದರ್ಶಿ ಹುದ್ದೆಯಲ್ಲಿ ಮುಂದುವರೆಸಿರುವ ಹಿನ್ನೆಲೆಯಲ್ಲಿ ಪ್ರಧಾನ ಕಾರ್ಯದರ್ಶಿ ಯೋಜನೆ ಮತ್ತು ಸಾಂಖ್ಯಿಕ ಇಲಾಖೆ ಹುದ್ದೆಯನ್ನು ದಿನಾಂಕ: 28.8.2004 ರಿಂದ ಪೂರ್ವಾನ್ವಯವಾಗಿ ಜಾರಿಗೆ ಬರುವಂತೆ ಹಾಗೂ ಮುಂದಿನ ಆದೇಶದವರೆಗೆ ಅಪರ ಮುಖ್ಯ ಕಾರ್ಯದರ್ಶಿ ಹಾಗೂ ಪ್ರಧಾನ ಕಾರ್ಯದರ್ಶಿ ಯೋಜನೆ ಮತ್ತು ಸಾಂಖ್ಯಿಕ ಇಲಾಖೆ ಹುದ್ದೆ ಎಂದು ಉನ್ನತೀಕರಿಸುವ ಅಗತ್ಯತೆಯನ್ನು ಮನಗಂಡು ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಸಿಆಸುಇ 68 ಸಸಿವಿ 2004 ಬೆಂಗಳೂರು, ದಿನಾಂಕ: 8ನೇ ಅಕ್ಟೋಬರ್ 2004**

ಪ್ರಧಾನ ಕಾರ್ಯದರ್ಶಿ, ಯೋಜನೆ ಮತ್ತು ಸಾಂಖ್ಯಿಕ ಇಲಾಖೆ ಹುದ್ದೆಯನ್ನು ದಿನಾಂಕ: 28.8.2004 ರಿಂದ ಪೂರ್ವಾನ್ವಯವಾಗಿ ಜಾರಿಗೆ ಬರುವಂತೆ ಹಾಗೂ ಮುಂದಿನ ಆದೇಶದವರೆವಿಗೆ ಅಪರ ಮುಖ್ಯ ಕಾರ್ಯದರ್ಶಿ ಹಾಗೂ ಪ್ರಧಾನ ಕಾರ್ಯದರ್ಶಿ, ಯೋಜನೆ ಮತ್ತು ಸಾಂಖ್ಯಿಕ ಇಲಾಖೆ ಎಂದು ಉನ್ನತೀಕರಿಸಲಾಗಿದೆ.

ಈಗಾಗಲೇ ಇವರ ಆಪ್ತ ಶಾಖೆಯಲ್ಲಿ ಚಾಲ್ತಿಯಲ್ಲಿರುವ ಹುದ್ದೆಗಳ ಬದಲು ಈ ಹುದ್ದೆಗಳ ಎದುರು ನಮೂದಿಸಿರುವ ಹುದ್ದೆಗಳು ದಿನಾಂಕ: 28.8.2004 ರಿಂದ ಮುಂದಿನ ಆದೇಶದವರೆವಿಗೆ ಚಾಲ್ತಿಯಲ್ಲಿರುತ್ತದೆ.

| ಪ್ರಸ್ತುತ ಚಾಲ್ತಿಯಲ್ಲಿರುವ ಹುದ್ದೆಗಳು ಹಾಗೂ ಸಂಖ್ಯೆ | | ದಿನಾಂಕ: 28.8.2004 ರಿಂದ ಚಾಲ್ತಿಯಲ್ಲಿರುವ ಹುದ್ದೆ | |
|---|---|---|---|
| **ಆಪ್ತ ಕಾರ್ಯದರ್ಶಿ**<br>(ಆಪ್ತ ಕಾರ್ಯದರ್ಶಿ ಗ್ರೇಡ್-2 ಪತ್ರಾಂಕಿತ ಆಪ್ತ ಸಹಾಯಕರು) | 1 | **ಆಪ್ತ ಕಾರ್ಯದರ್ಶಿ**<br>ಕರ್ನಾಟಕ ಸರ್ಕಾರ ಸಚಿವಾಲಯದ ಉ.ಕಾ: ಅ.ಕಾ: ಅ.ಕಾ.ಗ್ರೇಡ್-2 ಅಥವಾ ಕೆ.ಎ.ಎಸ್. ಹಿರಿಯ ಶ್ರೇಣಿ: ಕಿರಿಯ ಶ್ರೇಣಿ | 1 |
| ಪತ್ರಾಂಕಿತ ಆಪ್ತ ಸಹಾಯಕ/<br>ಹಿರಿಯ ಶೀಘ್ರಲಿಪಿಗಾರ<br>ಶಾಖಾಧಿಕಾರಿ: ಹಿರಿಯ ಸಹಾಯಕ | 1<br><br>1 | ಪತ್ರಾಂಕಿತ ಆಪ್ತ ಸಹಾಯಕರು<br>ಹಿರಿಯ ಶೀಘ್ರಲಿಪಿಗಾರ<br>ಶಾಖಾಧಿಕಾರಿ: ಹಿರಿಯ ಸಹಾಯಕ | 3<br><br>1 |
| ಕಿರಿಯ ಸಹಾಯಕ: ಸಹಾಯಕ | 1 | ಕಿರಿಯ ಸಹಾಯಕ: ಸಹಾಯಕ | 3 |
| - | - | ಹಿರಿಯ ಬೆರಳಚ್ಚುಗಾರ | 1 |
| ವಾಹನ ಚಾಲಕ | 1 | ವಾಹನ ಚಾಲಕ | 1 |
| ದಲಾಯತ್ | 2 | ದಲಾಯತ್ | 4 |

ಸದರಿ ಆದೇಶವನ್ನು ಆರ್ಥಿಕ ಇಲಾಖೆಯ ಟಿಪ್ಪಣಿ ಸಂಖ್ಯೆ: ಆಇ 1587/ ವೆಚ್ಚ-5/04 ದಿನಾಂಕ: 23.9.2004 ರಲ್ಲಿ ನೀಡಿರುವ ಸಹಮತಿಯ ಮೇರೆಗೆ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಹೆಚ್. ಆರ್. ನಾಗೇಂದ್ರ**

ಪಿ.ಆರ್.1163 ಸರ್ಕಾರದ ಅಧೀನ ಕಾರ್ಯದರ್ಶಿ, ಸಿಆಸುಇ (ಸೇವೆಗಳು-2).

**ವಿಷಯ :** ಸರ್ಕಾರಿ ನೌಕರರ ವರ್ಗಾವಣೆಗಳು - ಸಮೂಹ 'ಸಿ' ಮತ್ತು 'ಡಿ' ವೃಂದದ ನೌಕರರ ವರ್ಗಾವಣೆಗೆ ವೃಂದ ನಿರ್ವಹಣಾ ಪ್ರಾಧಿಕಾರ

**ಓದಲಾಗಿದೆ :** 1. ದಿನಾಂಕ: 22.11.2001ರ ಆದೇಶ ಸಂಖ್ಯೆ: ಡಿಪಿಎಆರ್ 4 ಎಸ್‌ಟಿಆರ್ 2001.
2. ಸರ್ಕಾರದ ಆದೇಶ ಸಂಖ್ಯೆ: ಗ್ರಾಅಪ 316 ಕೆಎಸ್‌ಎಸ್ 04, ದಿನಾಂಕ: 20.9.2004.

**ಪ್ರಸ್ತಾವನೆ:**

ದಿನಾಂಕ: 22.11.2001ರ ಸರ್ಕಾರಿ ಆದೇಶ ಸಂಖ್ಯೆ: ಸಿಆಸುಇ 4 ಎಸ್‌ಟಿಆರ್ 2001 ರಲ್ಲಿರುವ ಸರ್ಕಾರಿ ನೌಕರರ ವರ್ಗಾವಣಾ ಮಾರ್ಗಸೂಚಿಗಳಲ್ಲಿನ ಕಂಡಿಕೆ 10.1(ಸಿ)ರನ್ವಯ ಒಂದು ಜಿಲ್ಲೆಯೊಳಗಿನ 'ಸಿ' ಮತ್ತು 'ಡಿ' ಸಮೂಹದ ನೌಕರರ ವರ್ಗಾವಣೆಯನ್ನು ಆಯಾ ಜಿಲ್ಲೆಯ ಜಿಲ್ಲಾಧಿಕಾರಿಗಳ ಅಧ್ಯಕ್ಷತೆಯಲ್ಲಿ ರಚಿಸಿರುವ ವೃಂದ ನಿರ್ವಹಣಾ ಪ್ರಾಧಿಕಾರ ಮಾಡಬಹುದಾಗಿದೆ. ಜಿಲ್ಲಾ ಪಂಚಾಯತ್ ವ್ಯಾಪ್ತಿಯಲ್ಲಿರುವ 29 ಇಲಾಖೆಗಳ ನೌಕರರ ವರ್ಗಾವಣೆಯನ್ನು ಇದೇ ವೃಂದ ನಿರ್ವಹಣಾ ಪ್ರಾಧಿಕಾರ ಮಾಡುತ್ತಿತ್ತು. ಜಿಲ್ಲಾ ಪಂಚಾಯತ್ ವ್ಯಾಪ್ತಿಯಲ್ಲಿರುವ 'ಸಿ' ಮತ್ತು 'ಡಿ' ನೌಕರರ ವರ್ಗಾವಣೆಯನ್ನೂ ಜಿಲ್ಲಾ ಪಂಚಾಯತ್‌ನ ಮುಖ್ಯ ಕಾರ್ಯ ನಿರ್ವಾಹಣಾಧಿಕಾರಿಯವರ ಅಧ್ಯಕ್ಷತೆಯಲ್ಲಿರುವ ವೃಂದ ನಿರ್ವಹಣಾ ಪ್ರಾಧಿಕಾರವು ಮಾಡತಕ್ಕದ್ದೆಂದು ಮೇಲೆ (2) ರಲ್ಲಿ ಓದಲಾದ ಸರ್ಕಾರದ ಆದೇಶದಲ್ಲಿ ಆದೇಶಿಸಲಾಗಿದೆ. ಇದರ ಹಿನ್ನೆಲೆಯಲ್ಲಿ ಜಿಲ್ಲೆಗಳಲ್ಲಿನ ಇನ್ನುಳಿದ ಸಮೂಹ 'ಸಿ' ಮತ್ತು 'ಡಿ' ಯ ನೌಕರರ ವರ್ಗಾವಣೆಗೆ ವೃಂದ ನಿರ್ವಹಣಾ ಪ್ರಾಧಿಕಾರವನ್ನು ಪುನರ್‌ರಚಿಸುವ ಅಗತ್ಯವುಂಟಾಗಿದೆ.

**ಸರ್ಕಾರಿ ಆದೇಶ ಸಂಖ್ಯೆ: ಸಿಆಸುಇ 25 ಸೇನೌವ 2004 ಬೆಂಗಳೂರು ದಿನಾಂಕ: 12ನೇ ಅಕ್ಟೋಬರ್ 2004**

ದಿನಾಂಕ 22.11.2001ರ ಆದೇಶ ಸಂಖ್ಯೆ: ಡಿಪಿಎಆರ್ 4 ಎಸ್‌ಟಿಆರ್ 2001ರ ಕಂಡಿಕೆ 10.1(ಸಿ)ಯನ್ನು ಕೆಳಕಂಡಂತೆ ಮಾರ್ಪಡಿಸಲಾಗಿದೆ.

"Cadre Management Authority for transferring the Government servants holding Group 'C' and 'D' posts within the same district excluding the posts in the Zilla Panchayats" shall consist of-

(i) Deputy Commissioner : Chair Person
(ii) District level Officer of the Department concerned holding a Group-A post : Member
(iii) Head Quarters Assistant to the Deputy Commissioner : Member Secretary

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಪಿ. ಕೆ. ಬಾಬುರಾವ್**

ಸರ್ಕಾರದ ಅಧೀನ ಕಾರ್ಯದರ್ಶಿ-1, ಸಿಆಸುಇ (ಸೇವಾ ನಿಯಮಗಳು).

ಪಿ.ಆರ್.1164

**FOREST ECOLOGY AND ENVIRONMENT SECRETARIAT**

**Sub :** Application No. 410 file by Air Marshal (Retd). K. C. Cariappa, before the CEC regarding lease of forest land for rubber cultivation in Kodagu District.

**Read :** 1. Letter No. 1-26 CEC/2004 dated: 24.9.2004 of Member Secretary, Central Empowered Committee, New Delhi.

**Preamble:**

The Member Secretary Central Empowered Committee New Delhi in his letter read at above has requested to nominate a senior State Government Officer as a nodal officer for application No. 410 to interact and provide requisite information to the Central Empowered Committee. The State Government has considered the request and hence the orders.

**Government Order No FEE 123 FLL 2004 (P-1), Bangalore dated: 14th October 2004**

In the circumstances explained in the preamble, Government are pleased to nominate Sri C. S. Vedanth, Addl. Principal Chief Conservator of Forests, as a Nodal Officer in respect of application No. 410 before Central Empowered Committee.

Sri C. S. Vedanth, Addl. Principal Chief Conservator of Forests, shall interact with the Central Empowered Committee and provide requisite information to the Central Empowered Committee.

By Order and in the name of the Governor of Karnataka,

**S. R. VATSALA**

Under Secretary to Government,
Forest, Ecology and Environment Department.

PR-1165

**ಒಳಾಡಳಿತ ಮತ್ತು ಸಾರಿಗೆ ಸಚಿವಾಲಯ**

**ವಿಷಯ :** ಬೆರಳಚ್ಚುಗಾರರ ಹುದ್ದೆಯನ್ನು ಹಿರಿಯ ಬೆರಳಚ್ಚುಗಾರರ ಹುದ್ದೆಗೆ ಮೇಲ್ದರ್ಜೆಗೇರಿಸುವ ಬಗ್ಗೆ.

**ಓದಲಾಗಿದೆ :** 1. ಪೊಲೀಸ್ ಮಹಾ ನಿರ್ದೇಶಕರು ಮತ್ತು ಕಾರಾಗೃಹಗಳ ಮಹಾ ನಿರೀಕ್ಷಕರು, ಬೆಂಗಳೂರು ರವರ ಪತ್ರ ಸಂಖ್ಯೆ: ಇ4: ಸಿಆರ್-80: 2002 ದಿನಾಂಕ: 23.1.2003.

**ಪ್ರಸ್ತಾವನೆ:**

ಮೇಲೆ ಓದಲಾದ ದಿನಾಂಕ: 23.1.2003ರ ಪತ್ರದಲ್ಲಿ ಪೊಲೀಸ್ ಮಹಾನಿರ್ದೇಶಕರು ಮತ್ತು ಕಾರಾಗೃಹಗಳ ಮಹಾನಿರೀಕ್ಷಕರು ಸರ್ಕಾರಿ ಆದೇಶ ಸಂಖ್ಯೆ: ಎಫ್‌ಡಿ 66 ಎಸ್‌ಆರ್‌ಪಿ 81, ದಿನಾಂಕ: 17.12.1981 ರನ್ವಯ ಪ್ರತಿಯೊಂದು ಇಲಾಖೆಯಲ್ಲಿ ಬೆರಳಚ್ಚುಗಾರರ ಮಂಜೂರಾದ 5 ಕ್ಕಿಂತ ಹೆಚ್ಚು ಹುದ್ದೆಗಳಿದ್ದಲ್ಲಿ ಶೇ. 20 ರಷ್ಟು ಹುದ್ದೆಗಳನ್ನು ಹಿರಿಯ ಬೆರಳಚ್ಚುಗಾರರ ಹುದ್ದೆಗೆ ಸ್ಥಾನೋನ್ನತಿಗೇರಿಸಿ ಪರಿವರ್ತಿಸಲು ಅನುಮತಿಸಿದ್ದು, ಅದರಂತೆ ಕಾರಾಗೃಹಗಳ ಇಲಾಖೆಯಲ್ಲಿ ಬೆರಳಚ್ಚುಗಾರರ ಒಟ್ಟು 25 ಖಾಯಂ ಹುದ್ದೆಗಳಿದ್ದು ಅದಕ್ಕೆ

ಸಂಬಂಧಿಸಿದಂತೆ 5 ಹಿರಿಯ ಬೆರಳಚ್ಚುಗಾರರ ಹುದ್ದೆಗಳಿರಬೇಕಾಗುತ್ತದೆ. ಈ 5 ಹುದ್ದೆಗಳ ಪೈಕಿ ಈಗಾಗಲೇ ಸರ್ಕಾರಿ ಆದೇಶ ಸಂಖ್ಯೆ: ಹೆಚ್‌ಡಿ 97 ಪಿಆರ್‌ಇ 87, ದಿನಾಂಕ: 8.3.1988ರಲ್ಲಿ ಒಂದು ಹಿರಿಯ ಬೆರಳಚ್ಚುಗಾರರ ಹುದ್ದೆ ಮೇಲ್ದರ್ಜೆಗೇರಿಸಲಾಗಿದೆ. ಆದ್ದರಿಂದ ಹಾಲಿ ಲಭ್ಯವಿರುವ ಬೆರಳಚ್ಚುಗಾರರ (ವೇತನ ಶ್ರೇಣಿ 3000-5450) ಒಟ್ಟು ಹುದ್ದೆಗಳಿಗೆ ಅನುಗುಣವಾಗಿ ಉಳಿದ 4 ಹುದ್ದೆಗಳನ್ನು ಹಿರಿಯ ಬೆರಳಚ್ಚುಗಾರರ ಹುದ್ದೆಗೆ (ವೇತನ ಶ್ರೇಣಿ 3850-7050) ಮೇಲ್ದರ್ಜೆಗೇರಿಸುವಂತೆ ಸರ್ಕಾರದ ಆದೇಶವನ್ನು ಕೋರಿದ್ದಾರೆ.

ಮೇಲಿನ ಪ್ರಸ್ತಾವನೆಯನ್ನು ಪರಿಶೀಲಿಸಿ ಸರ್ಕಾರ ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರಿ ಆದೇಶ ಸಂಖ್ಯೆ: ಹೆಚ್‌ಡಿ 29 ಪಿಆರ್‌ಇ 2003, ಬೆಂಗಳೂರು ದಿನಾಂಕ: 12ನೇ ಅಕ್ಟೋಬರ್ 2004**

ಕಾರಾಗೃಹಗಳ ಇಲಾಖೆಯಲ್ಲಿ ಹಾಲಿ ಲಭ್ಯವಿರುವ 25 ಬೆರಳಚ್ಚುಗಾರರ ಹುದ್ದೆಗಳಿಗೆ ಅನುಗುಣವಾಗಿ, ಈಗಾಗಲೇ ಮೇಲ್ದರ್ಜೆಗೇರಿಸಿರುವ 1 ಹಿರಿಯ ಬೆರಳಚ್ಚುಗಾರರ ಹುದ್ದೆಯನ್ನು ಹೊರತುಪಡಿಸಿ, ಉಳಿದ ಬೆರಳಚ್ಚುಗಾರರ 4 ಹುದ್ದೆಗಳನ್ನು ಹಿರಿಯ ಬೆರಳಚ್ಚುಗಾರರ ಹುದ್ದೆಗೆ (ವೇತನ ಶ್ರೇಣಿ ರೂ. 3850-7050) ಮೇಲ್ದರ್ಜೆಗೇರಿಸಿ ತಕ್ಷಣದಿಂದ ಜಾರಿಗೆ ಬರುವಂತೆ ಆದೇಶಿಸಿದೆ.

ಸದರಿ ಮೇಲ್ದರ್ಜೆಗೇರಿಸಿದ ಹುದ್ದೆಗಳಿಗೆ ತಗಲುವ ವೆಚ್ಚವನ್ನು "2056-00-001-0-01 ನಿರ್ದೇಶನ ಮತ್ತು ಆಡಳಿತ ಕಾರಾಗೃಹಗಳ ಮಹಾ ನಿರೀಕ್ಷಕರು "ಲೆಕ್ಕ ಶೀರ್ಷಿಕೆಯಲ್ಲಿ ಭರಿಸತಕ್ಕದ್ದು.

ಈ ಆದೇಶವನ್ನು ಆರ್ಥಿಕ ಇಲಾಖೆಯ ಆದೇಶ ಸಂಖ್ಯೆ: ಎಫ್‌ಡಿ 66 ಎಸ್‌ಆರ್‌ಪಿ 81, ದಿನಾಂಕ: 17.12.1981ರಲ್ಲಿ ಇಲಾಖಾ ಕಾರ್ಯದರ್ಶಿಗಳಿಗೆ ಪ್ರದತ್ತವಾದ ಅಧಿಕಾರದ ಅನ್ವಯ ಈ ಆದೇಶ ಹೊರಡಿಸಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎ. ಎಸ್. ಕಾಂತರಾಜು**

ಪಿ.ಆರ್.1166

ಸರ್ಕಾರದ ಅಧೀನ ಕಾರ್ಯದರ್ಶಿ,

ಒಳಾಡಳಿತ ಮತ್ತು ಸಾರಿಗೆ ಇಲಾಖೆ (ಸೆರೆಮನೆ ಮತ್ತು ಸಿನಿಮಾ).

## ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಸಚಿವಾಲಯ

**ವಿಷಯ :** ಕರ್ನಾಟಕ- ಮಹಾರಾಷ್ಟ್ರ- ಕೇರಳ ಗಡಿ ವಿವಾದದ ಬಗ್ಗೆ ವಿಶೇಷ ಕಾನೂನು ಸಲಹಾ ಸಮಿತಿಯ ಪುನರ್ ರಚನೆ ಬಗ್ಗೆ.

**ಓದಲಾಗಿದೆ :** 1. ಸರ್ಕಾರದ ಆದೇಶ ಸಂಖ್ಯೆ: ಸಿಆಸುಇ 13 ರಾಗವಿ 2002 ದಿನಾಂಕ: 20.6.2003

**ಪ್ರಸ್ತಾವನೆ:**

ಕರ್ನಾಟಕ - ಮಹಾರಾಷ್ಟ್ರ- ಕೇರಳ ಗಡಿ ವಿವಾದವು ಮಹಾಜನ್ ಆಯೋಗದ ತೀರ್ಮಾನದ ಪ್ರಕಾರ ಮುಗಿದ ಅಧ್ಯಾಯವೆಂದು ಕರ್ನಾಟಕ ಸರ್ಕಾರವು ಭಾವಿಸಿದೆ. ಆದರೆ, ಮಹಾರಾಷ್ಟ್ರ ಸರ್ಕಾರವು ಕರ್ನಾಟಕ- ಮಹಾರಾಷ್ಟ್ರ ಗಡಿ ವಿವಾದದ ಬಗ್ಗೆ ಸರ್ವೋಚ್ಚ ನ್ಯಾಯಾಲಯದಲ್ಲಿ ದಾವೆ ಹೂಡಿರುವುದರಿಂದ ರಾಜ್ಯದ ಹಿತವನ್ನು ಕಾಪಾಡುವ ಸಲುವಾಗಿ, ಗಡಿ ವಿವಾದಕ್ಕೆ ಅಗತ್ಯವಿರುವ ಮಾಹಿತಿ ದಾಖಲಾತಿಗಳನ್ನು ಸಂಗ್ರಹಿಸಿ, ಕ್ರೋಢೀಕರಿಸಿ ಸರ್ವೋಚ್ಚ ನ್ಯಾಯಾಲಯದ ಮುಂದೆ ವಾದ ಮಾಡುವ ಹಿರಿಯ ನ್ಯಾಯವಾದಿಗಳಿಗೆ ಒದಗಿಸುವ ಸಲುವಾಗಿ ಒಂದು ವಿಶೇಷ ಕಾನೂನು ಸಲಹಾ ಸಮಿತಿಯನ್ನು ಮೇಲೆ ಓದಲಾದ ಸರ್ಕಾರಿ ಆದೇಶದಲ್ಲಿ ಹಿರಿಯ ನ್ಯಾಯವಾದಿಗಳಾದ ಶ್ರೀ ಹೆಚ್. ಬಿ. ದಾತಾರ್ ಅವರ ಅಧ್ಯಕ್ಷತೆಯಲ್ಲಿ ರಚಿಸಲಾಗಿತ್ತು. ಸದರಿ ಸಮಿತಿಯನ್ನು ಈ ಕೆಳಕಂಡಂತೆ ಪುನರ್ ರಚಿಸಲು ಸರ್ಕಾರ ತೀರ್ಮಾನಿಸಿದೆ. ಕಾರಣ ಈ ಆದೇಶ.

**ಸರ್ಕಾರದ ಆದೇಶ ಸಂಖ್ಯೆ: ಸಿಆಸುಇ 19 ರಾಗವಿ 2004 ಬೆಂಗಳೂರು, ದಿನಾಂಕ: 8ನೇ ಅಕ್ಟೋಬರ್ 2004**

ಕರ್ನಾಟಕ - ಮಹಾರಾಷ್ಟ್ರ ಗಡಿ ವಿವಾದದ ಬಗ್ಗೆ ಸರ್ವೋಚ್ಚ ನ್ಯಾಯಾಲಯದಲ್ಲಿ ಕರ್ನಾಟಕ ಸರ್ಕಾರದ ಪರವಾಗಿ ವಾದಿಸುವ ಹಿರಿಯ ನ್ಯಾಯವಾದಿಗಳಿಗೆ ಅಗತ್ಯವಿರುವ ಮಾಹಿತಿಯನ್ನು ಸಂಗ್ರಹಿಸಿ, ಕ್ರೋಢೀಕರಿಸಿ ಒದಗಿಸುವ ಸಲುವಾಗಿ ಶ್ರೀ ಹೆಚ್. ಬಿ. ದಾತಾರ್ ಹಿರಿಯ ನ್ಯಾಯವಾದಿಗಳು, ಅವರ ಅಧ್ಯಕ್ಷತೆಯಲ್ಲಿ ಸರ್ಕಾರಿ ಆದೇಶ ಸಂಖ್ಯೆ: ಸಿಆಸುಇ 13 ರಾಗವಿ 2002, ದಿನಾಂಕ: 20.6.2003 ರಲ್ಲಿ ರಚಿಸಿದ್ದ ವಿಶೇಷ ಕಾನೂನು ಸಲಹಾ ಸಮಿತಿಯನ್ನು ಈ ಕೆಳಕಂಡಂತೆ ಪುನರ್ ರಚಿಸಲಾಗಿದೆ.

| | |
|---|---|
| ಶ್ರೀ ಹೆಚ್. ಬಿ. ದಾತಾರ್ ಹಿರಿಯ ನ್ಯಾಯವಾದಿಗಳು. | ಅಧ್ಯಕ್ಷರು |
| ಅಡ್ವೋಕೇಟ್ ಜನರಲ್ ಕರ್ನಾಟಕ ಬೆಂಗಳೂರು | ಸದಸ್ಯರು |
| ಸರ್ಕಾರದ ಅಪರ ಮುಖ್ಯ ಕಾರ್ಯದರ್ಶಿ ಮತ್ತು ಅಭಿವೃದ್ಧಿ ಆಯುಕ್ತರು | ಸದಸ್ಯರು |
| ಸರ್ಕಾರದ ಪ್ರಧಾನ ಕಾರ್ಯದರ್ಶಿ, ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆ | ಸದಸ್ಯರು |
| ಶ್ರೀ ಎಸ್. ವಿ. ಪಾಟೀಲ್, ಅಡ್ವೋಕೇಟ್ ನಂ. ಸಿಸಿಬಿ 37, ಗಣೇಶ ರಸ್ತೆ, ವೈಭವ ನಗರ ಬೆಳಗಾಂ | ಸದಸ್ಯರು |
| ಶ್ರೀ ಕೆ. ಎನ್. ಬೆಂಗೇರಿ, ಅಡ್ವೋಕೇಟ್ ನಂ. ಡಿ. 2:791, ಬಿ.ಡಿ.ಎ. ಫ್ಲಾಟ್ಸ್, ನೀಲಸಂದ್ರ, ಬೆಂಗಳೂರು-560 047 | ಸದಸ್ಯರು |
| ಸರ್ಕಾರದ ಕಾರ್ಯದರ್ಶಿ ಕಾನೂನು ಇಲಾಖೆ | ಸದಸ್ಯ-ಕಾರ್ಯದರ್ಶಿ |

ಈ ಸಮಿತಿಯು ಮಹಾರಾಷ್ಟ್ರ - ಕರ್ನಾಟಕ ಗಡಿ ವಿವಾದಕ್ಕೆ ಸಂಬಂಧಿಸಿದಂತೆ ಅಗತ್ಯವಿರುವ ಮಾಹಿತಿ: ದಾಖಲೆಗಳ ಬಗ್ಗೆ ನಿರ್ಧರಿಸುವುದು ಮತ್ತು ಅದನ್ನು ಸಂಬಂಧಪಟ್ಟ ಇಲಾಖೆ: ನಿಗಮ: ಮಂಡಳಿ: ಪ್ರಾಧಿಕಾರ ಮುಂತಾದವುಗಳಿಂದ ಸಂಗ್ರಹಿಸಿ ಕ್ರೋಢೀಕರಿಸಿ ರಾಜ್ಯ ಸರ್ಕಾರದ ಪರವಾಗಿ ಸರ್ವೋಚ್ಚ ನ್ಯಾಯಾಲಯದಲ್ಲಿ ವಾದಿಸುವ ಹಿರಿಯ ನ್ಯಾಯವಾದಿಗಳಿಗೆ ಒದಗಿಸುವುದು.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಬಿ. ಆರ್. ಗಂಗಾಧರಯ್ಯ**

ಪಿ.ಆರ್.1168

ಸರ್ಕಾರದ ಅಧೀನ ಕಾರ್ಯದರ್ಶಿ (ಪ್ರಭಾರ), ಸಿಆಸುಇ (ರಾಜಕೀಯ).

**ವಿಷಯ :** ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಇಲಾಖೆಯ ಪ್ರಧಾನ ಕಾರ್ಯದರ್ಶಿ ಹುದ್ದೆಯನ್ನು ಕಾರ್ಯದರ್ಶಿ ಹುದ್ದೆ ಎಂದು ನಿಮ್ನೀಕರಿಸುವ ಬಗ್ಗೆ.

**ಓದಲಾಗಿದೆ :** 1. ಅಧಿಸೂಚನೆ ಸಂಖ್ಯೆ: ಡಿಪಿಎಆರ್ 337 ಎಸ್ಎಎಸ್ 2004 ದಿನಾಂಕ: 10.9.2004.

**ಪ್ರಸ್ತಾವನೆ:**

ಮೇಲೆ ಕ್ರಮ ಸಂಖ್ಯೆ (1) ರಲ್ಲಿ ಓದಲಾದ ದಿನಾಂಕ: 10.9.2004ರ ಅಧಿಸೂಚನೆಯಲ್ಲಿ ಶ್ರೀ ಜಿ. ಗುರುಚರಣ್, ಐ.ಎ.ಎಸ್. ಇವರನ್ನು ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಇಲಾಖೆಯಲ್ಲಿ ನಿಮ್ನೀಕರಿಸಲಾದ ಸರ್ಕಾರದ ಕಾರ್ಯದರ್ಶಿ ಹುದ್ದೆಗೆ ತಕ್ಷಣದಿಂದ ಜಾರಿಗೆ ಬರುವಂತೆ ಹಾಗೂ ಮುಂದಿನ ಆದೇಶದವರೆಗೆ ನೇಮಿಸಲಾಗಿದೆ.

ಈ ಕಾರಣದಿಂದಾಗಿ ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಇಲಾಖೆಯಲ್ಲಿ ಅಸ್ತಿತ್ವದಲ್ಲಿರುವ ಪ್ರಧಾನ ಕಾರ್ಯದರ್ಶಿ ಹುದ್ದೆಯನ್ನು ಸರ್ಕಾರದ ಕಾರ್ಯದರ್ಶಿ ಹುದ್ದೆ ಎಂದು ನಿಮ್ನೀಕರಿಸುವ ಬಗ್ಗೆ ಪರಿಶೀಲಿಸಲಾಗಿದ್ದು ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರಿ ಆದೇಶ ಸಂಖ್ಯೆ: ಸಿಆಸುಇ 78 ಸಸಿವಿ 2004, ಬೆಂಗಳೂರು, ದಿನಾಂಕ: 5ನೇ ಅಕ್ಟೋಬರ್ 2004**

ಕರ್ನಾಟಕ ಸರ್ಕಾರ ಸಚಿವಾಲಯದಲ್ಲಿನ ಪ್ರಸ್ತುತ ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಇಲಾಖೆಯಲ್ಲಿ ಅಸ್ತಿತ್ವದಲ್ಲಿರುವ ಸರ್ಕಾರದ ಪ್ರಧಾನ ಕಾರ್ಯದರ್ಶಿ ಹುದ್ದೆಯನ್ನು ಶ್ರೀ ಜಿ. ಗುರುಚರಣ್, ಐ.ಎ.ಎಸ್. ಇವರು ಕಾರ್ಯವರದಿ ಮಾಡಿಕೊಂಡ ದಿನಾಂಕದಿಂದ ಜಾರಿಗೆ ಬರುವಂತೆ ಹಾಗೂ ಮುಂದಿನ ಆದೇಶದವರೆಗೆ ಸರ್ಕಾರದ ಕಾರ್ಯದರ್ಶಿ, ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಇಲಾಖೆ ಎಂದು ನಿಮ್ನೀಕರಿಸಲಾಗಿದೆ. ಹಾಗೂ ಸರ್ಕಾರಿ ಆದೇಶ ಸಂಖ್ಯೆ: ಸಿಆಸುಇ 305 ಸಿಶಾಸೇ 2000, ದಿನಾಂಕ: 8.6.2001ರಲ್ಲಿ ಕಾರ್ಯದರ್ಶಿಗಳ ಆಪ್ತ ಶಾಖೆಗೆ ನಿಗದಿಪಡಿಸಿರುವಂತೆ ಪೂರಕ ಸಿಬ್ಬಂದಿ ಹುದ್ದೆಗಳನ್ನು ಸಹ ಮಂಜೂರು ಮಾಡಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಹೆಚ್. ಆರ್.ನಾಗೇಂದ್ರ**

ಪಿ.ಆರ್.1169 ಸರ್ಕಾರದ ಅಧೀನ ಕಾರ್ಯದರ್ಶಿ, ಸಿಆಸುಇ (ಸೇವೆಗಳು-2).

**ವಿಷಯ :** ಕರ್ನಾಟಕ-ಮಹಾರಾಷ್ಟ್ರ-ಕೇರಳ ಗಡಿ ವಿವಾದದ ಬಗ್ಗೆ ಉನ್ನತ ಮಟ್ಟದ ಗಡಿ ವಿವಾದ ಸಲಹಾ ಸಮಿತಿಯ ಪುನರ್ ರಚನೆ ಬಗ್ಗೆ.

**ಓದಲಾಗಿದೆ :**
1. ದಿನಾಂಕ: 1.4.2003ರ ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆ (ರಾಜಕೀಯ) ವಿಭಾಗದ ಅ.ಟಿ.ಸಂಖ್ಯೆ: ಸಿಆಸುಇ 13 ರಾಗವಿ 2002
2. ದಿನಾಂಕ: 20.06.2003ರ ಸರ್ಕಾರದ ಆದೇಶ ಸಂಖ್ಯೆ: ಸಿಆಸುಇ 13 ರಾಗವಿ 2002
3. ಸರ್ಕಾರಿ ಆದೇಶ ಸಂಖ್ಯೆ: ಸಿಆಸುಇ 13 ರಾಗವಿ 2002 ದಿನಾಂಕ: 7.8.2003
4. ದಿನಾಂಕ: 8.10.2004ರ ಸರ್ಕಾರದ ಆದೇಶ ಸಂಖ್ಯೆ: ಸಿಆಸುಇ 19 ರಾಗವಿ 2004

**ಪ್ರಸ್ತಾವನೆ:**

ಕರ್ನಾಟಕ-ಮಹಾರಾಷ್ಟ್ರ-ಕೇರಳ ಗಡಿ ವಿವಾದವು ಮಹಾಜನ್ ಆಯೋಗದ ತೀರ್ಮಾನದ ಪ್ರಕಾರ ಮುಗಿದ ಅಧ್ಯಾಯವೆಂದು ಕರ್ನಾಟಕ ಸರ್ಕಾರ ಭಾವಿಸಿದೆ. ಆದರೆ, ಮಹಾರಾಷ್ಟ್ರ ಸರ್ಕಾರವು, ಕರ್ನಾಟಕ-ಮಹಾರಾಷ್ಟ್ರ ಗಡಿ ವಿವಾದದ ಕುರಿತು ಸರ್ವೋಚ್ಚ ನ್ಯಾಯಾಲಯದಲ್ಲಿ ದಾವೆ ಹೂಡಬಹುದೆಂದು ತಿಳಿದು ಬಂದ ಪ್ರಯುಕ್ತ, ಕರ್ನಾಟಕ ರಾಜ್ಯದ ಪರವಾಗಿ ಸರ್ವೋಚ್ಚ ನ್ಯಾಯಾಲಯದಲ್ಲಿ ವಾದಿಸಲು ಅನುಕೂಲವಾಗುವಂತೆ, ಮೂರು ಜನ ಹಿರಿಯ ನ್ಯಾಯವಾದಿಗಳನ್ನೊಳಗೊಂಡ ಕಾನೂನು ತಜ್ಞರ ಸಮಿತಿಯನ್ನು ರಚಿಸಲು ಕ್ರಮ ಸಂಖ್ಯೆ: (1)ರಲ್ಲಿ ಓದಲಾದ ಅನಧಿಕೃತ ಟಿಪ್ಪಣಿಯಲ್ಲಿ ಕೋರಲಾಗಿದೆ.

ಕ್ರಮಸಂಖ್ಯೆ: (2) ರಲ್ಲಿ ಓದಲಾದ ದಿನಾಂಕ: 20.06.2003ರ ಸರ್ಕಾರದ ಆದೇಶದಲ್ಲಿ ಸರ್ವೋಚ್ಚ ನ್ಯಾಯಾಲಯದಲ್ಲಿ ಕರ್ನಾಟಕದ ಪರವಾಗಿ ವಾದ ಮಾಡುವ ಕಾನೂನು ತಜ್ಞರ ಸಮಿತಿಗೆ ಅಗತ್ಯವಿರುವ ಮಾಹಿತಿಯನ್ನು ಸಂಗ್ರಹಿಸಿ, ಕ್ರೋಢೀಕರಿಸಿ ಒದಗಿಸುವ ಸಲುವಾಗಿ ಹಿರಿಯ ನ್ಯಾಯವಾದಿಗಳಾದ ಶ್ರೀ ಹೆಚ್. ಬಿ. ದಾತಾರ್ ಅವರ ಅಧ್ಯಕ್ಷತೆಯಲ್ಲಿ, ಒಂದು ವಿಶೇಷ ಕಾನೂನು ಸಲಹಾ ಸಮಿತಿಯನ್ನು ರಚಿಸಲಾಗಿತ್ತು, ಈ ಸಮಿತಿಯನ್ನು ಕ್ರಮ ಸಂಖ್ಯೆ (4)ರಲ್ಲಿ ಓದಲಾದ ಆದೇಶದಲ್ಲಿ ಪುನರ್ ರಚಿಸಲಾಗಿದೆ.

ಕರ್ನಾಟಕ-ಮಹಾರಾಷ್ಟ್ರ ಗಡಿ ವಿವಾದದ ಬಗ್ಗೆ ಕಾನೂನು ತಜ್ಞರ ಸಮಿತಿ ಹಾಗೂ ವಿಶೇಷ ಕಾನೂನು ಸಲಹಾ ಸಮಿತಿಗಳಲ್ಲದೆ, ಈ ವಿಷಯದಲ್ಲಿ ಏನಾದರೂ ರಾಜಕೀಯ ತೊಡಕುಗಳುಂಟಾದಲ್ಲಿ, ಅದರ ಪರಿಹಾರಕ್ಕೋಸ್ಕರ, ಕರ್ನಾಟಕದ ಮುಖ್ಯ ಮಂತ್ರಿಯವರ ಅಧ್ಯಕ್ಷತೆಯಲ್ಲಿ ಒಂದು ಉನ್ನತ ಮಟ್ಟದ ಸಲಹಾ ಸಮಿತಿಯನ್ನು ಕ್ರಮ ಸಂಖ್ಯೆ (3)ರಲ್ಲಿ ಓದಲಾದ ಸರ್ಕಾರಿ ಆದೇಶದಲ್ಲಿ ರಚಿಸಿದ್ದು, ಸರ್ಕಾರ ಬದಲಾಗಿರುವ ಪ್ರಯುಕ್ತ, ಸದರಿ ಸಮಿತಿಯನ್ನು ಪುನರ್ ರಚಿಸಲು ತೀರ್ಮಾನಿಸಿದೆ. ಆದುದರಿಂದ ಈ ಆದೇಶ.

**ಸರ್ಕಾರದ ಆದೇಶ ಸಂಖ್ಯೆ: ಸಿಆಸುಇ 20 ರಾಗವಿ 2004 ಬೆಂಗಳೂರು, ದಿನಾಂಕ: 11ನೇ ಅಕ್ಟೋಬರ್ 2004**

ಮೇಲೆ ವಿವರಿಸಿರುವ ಕಾರಣಗಳ ಹಿನ್ನೆಲೆಯಲ್ಲಿ, ಸರ್ಕಾರಿ ಆದೇಶ ಸಂಖ್ಯೆ: ಸಿಆಸುಇ 13 ರಾಗವಿ 2002 ದಿನಾಂಕ 7.8.2003ರಲ್ಲಿ ರಚಿಸಲಾಗಿದ್ದ ಉನ್ನತ ಮಟ್ಟದ ಗಡಿ ವಿವಾದ ಸಲಹಾ ಸಮಿತಿಯನ್ನು ಈ ಕೆಳಕಂಡಂತೆ ಸರ್ಕಾರ ಪುನರ್ ರಚಿಸಿದೆ.

| | | |
|---|---|---|
| 1. | ಮುಖ್ಯ ಮಂತ್ರಿಗಳು | ಅಧ್ಯಕ್ಷರು |
| 2. | ಉಪ ಮುಖ್ಯ ಮಂತ್ರಿಗಳು | ಸದಸ್ಯರು |
| 3. | ಜಲ ಸಂಪನ್ಮೂಲ ಮತ್ತು ಸಾರಿಗೆ ಸಚಿವರು | ಸದಸ್ಯರು |

| | | |
|---|---|---|
| 4. | ಕಂದಾಯ ಸಚಿವರು | ಸದಸ್ಯರು |
| 5. | ಕೃಷಿ ಮಾರುಕಟ್ಟೆ ಸಚಿವರು | ಸದಸ್ಯರು |
| 6. | ವಿಧಾನ ಸಭೆಯ ವಿರೋಧ ಪಕ್ಷದ ನಾಯಕರು | ಸದಸ್ಯರು |
| 7. | ವಿಧಾನ ಪರಿಷತ್ತಿನ ವಿರೋಧ ಪಕ್ಷದ ನಾಯಕರು | ಸದಸ್ಯರು |
| 8. | ಶ್ರೀ ಅಂಗಡಿ ಸುರೇಶ್ ಚೆನ್ನಬಸಪ್ಪ, ಬೆಳಗಾವಿ ಕ್ಷೇತ್ರದ ಸಂಸತ್ ಸದಸ್ಯರು | ಸದಸ್ಯರು |
| 9. | ಶ್ರೀ ಜಿಗಜಿಣಗಿ ರಮೇಶ್ ಚಂದಪ್ಪ, ಚಿಕ್ಕೋಡಿ ಕ್ಷೇತ್ರದ ಸಂಸತ್ ಸದಸ್ಯರು | ಸದಸ್ಯರು |
| 10. | ಶ್ರೀ ಡಿ. ವಿ. ಸದಾನಂದ ಗೌಡ, ಮಂಗಳೂರು ಕ್ಷೇತ್ರದ ಸಂಸತ್ ಸದಸ್ಯರು | ಸದಸ್ಯರು |
| 11. | ಅಧ್ಯಕ್ಷರು, ಕನ್ನಡ ಸಾಹಿತ್ಯ ಪರಿಷತ್ತು | ಸದಸ್ಯರು |
| 12. | ಶ್ರೀ ಚನ್ನವೀರ ಕಣವಿ, ಸಾಹಿತಿಗಳು | ಸದಸ್ಯರು |
| 13. | ಪ್ರೋ॥ ಡಿ. ಜವರೇಗೌಡ, ನಿವೃತ್ತ ಉಪ ಕುಲಪತಿಗಳು, ಮೈಸೂರು ವಿಶ್ವವಿದ್ಯಾಲಯ | ಸದಸ್ಯರು |
| 14. | ಶ್ರೀ ಪಾಟೀಲ ಪುಟ್ಟಪ್ಪ, ಮಾಜಿ ಅಧ್ಯಕ್ಷರು, ಕನ್ನಡ ಕಾವಲು ಮತ್ತು ಗಡಿ ಸಲಹಾ ಸಮಿತಿ | ಸದಸ್ಯರು |
| 15. | ಶ್ರೀ ಚಂದ್ರಶೇಖರ ಪಾಟೀಲ್, ಮಾಜಿ ಅಧ್ಯಕ್ಷರು, ಕನ್ನಡ ಕಾವಲು ಮತ್ತು ಗಡಿ ಸಲಹಾ ಸಮಿತಿ | ಸದಸ್ಯರು |
| 16. | ಶ್ರೀ ವಾಟಾಳ್ ನಾಗರಾಜ್, ವಿಧಾನ ಸಭಾ ಸದಸ್ಯರು | ಸದಸ್ಯರು |
| 17. | ಶ್ರೀ ಜಿ. ನಾರಾಯಣ, ಮಾಜಿ ಅಧ್ಯಕ್ಷರು, ಕನ್ನಡ ಸಾಹಿತ್ಯ ಪರಿಷತ್ತು, ಬೆಂಗಳೂರು | ಸದಸ್ಯರು |
| 18. | ಶ್ರೀ ಚಿದಾನಂದ ಮೂರ್ತಿ, ಸಂಶೋಧಕರು ಹಾಗೂ ಪ್ರಾಧ್ಯಾಪಕರು, ಬೆಂಗಳೂರು ವಿಶ್ವವಿದ್ಯಾಲಯ, ಬೆಂಗಳೂರು | ಸದಸ್ಯರು |
| 19. | ಶ್ರೀ ಬಿ. ಶಂಕರಾನಂದ, ಮಾಜಿ ಕೇಂದ್ರ ಮಂತ್ರಿಗಳು | ಸದಸ್ಯರು |
| 20. | ಸರ್ಕಾರದ ಮುಖ್ಯ ಕಾರ್ಯದರ್ಶಿಗಳು | ಸದಸ್ಯರು |
| 21. | ಶ್ರೀ ಚಿರಂಜೀವಿ ಸಿಂಗ್, ಅಪರ ಮುಖ್ಯ ಕಾರ್ಯದರ್ಶಿ ಹಾಗೂ ಅಭಿವೃದ್ಧಿ ಆಯುಕ್ತರು | ಸದಸ್ಯರು |
| 22. | ಸರ್ಕಾರದ ಕಾರ್ಯದರ್ಶಿ, ಕಾನೂನು ಇಲಾಖೆ | ಸದಸ್ಯರು |
| 23. | ಸರ್ಕಾರದ ಪ್ರಧಾನ ಕಾರ್ಯದರ್ಶಿಗಳು, ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆ. | ಸದಸ್ಯ ಕಾರ್ಯದರ್ಶಿ |

ಈ ಸಮಿತಿಯು, ಕರ್ನಾಟಕ-ಮಹಾರಾಷ್ಟ್ರ ಗಡಿ ವಿವಾದದ ಬಗ್ಗೆ ಕರ್ನಾಟಕ ಸರ್ಕಾರದ ಪರವಾಗಿ ಸರ್ವೋಚ್ಛ ನ್ಯಾಯಾಲಯದಲ್ಲಿ ವಾದಿಸುವ ಹಿರಿಯ ನ್ಯಾಯವಾದಿಗಳಿಗೆ ಸೂಕ್ತ ಮಾರ್ಗದರ್ಶನ/ ಮಾಹಿತಿ/ಸಲಹೆಗಳನ್ನು ನೀಡುವುದು ಮತ್ತು ಗಡಿ ವಿವಾದಕ್ಕೆ ಸಂಬಂಧಿಸಿದಂತೆ ಉದ್ಭವಿಸಬಹುದಾದ ರಾಜಕೀಯ ಅಂಶಗಳನ್ನು ಪರಿಶೀಲಿಸಿ ತೀರ್ಮಾನ ತೆಗೆದುಕೊಳ್ಳುವುದು.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಬಿ. ಆರ್. ಗಂಗಾಧರಯ್ಯ**

ಪಿ.ಆರ್.1145 ಸರ್ಕಾರದ ಅಧೀನ ಕಾರ್ಯದರ್ಶಿ (ಪ್ರಭಾರ), ಸಿಆಸುಇ (ರಾಜಕೀಯ).

## ಇಂಧನ ಸಚಿವಾಲಯ

**ವಿಷಯ :** ಮೆ: ಸಾಗರ್ ಪವರ್ ಲಿಮಿಟೆಡ್ ಕಂಪನಿಯ ಹೆಸರನ್ನು ಮೆ: ಸಾಗರ್ ಪವರ್ (ನೀರುಕಟ್ಟೆ) ಪ್ರೈವೇಟ್ ಎಂದು ಬದಲಾಯಿಸುವ ಬಗ್ಗೆ ಆದೇಶ.

**ಓದಲಾಗಿದೆ :** 1. ಸರ್ಕಾರಿ ಆದೇಶ ಸಂಖ್ಯೆ: ಡಿಇ 42 ಎನ್‌ಸಿಇ 98 ದಿನಾಂಕ: 11.11.1998

2. ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತದ ವ್ಯವಸ್ಥಾಪಕ ನಿರ್ದೇಶಕರ ಪತ್ರ ಸಂಖ್ಯೆ: ಕೆಆರ್‌ಇಡಿ: 06:ನೀರುಕಟ್ಟೆ: 2003/1784 ದಿನಾಂಕ: 25/28.09.2004.

**ಪ್ರಸ್ತಾವನೆ:**

ಮೇಲೆ (1)ರಲ್ಲಿ ಓದಲಾದ ಸರ್ಕಾರಿ ಆದೇಶದಲ್ಲಿ ಮೆ: ಸಾಗರ್ ಪವರ್ ಲಿಮಿಟೆಡ್ ಕಂಪನಿಯು ದಕ್ಷಿಣ ಕನ್ನಡ ಜಿಲ್ಲೆಯ ಪುತ್ತೂರು ತಾಲ್ಲೂಕಿನ ನೀರುಕಟ್ಟೆ ಗ್ರಾಮದ ಬಳಿ ನೇತ್ರಾವತಿ ನದಿಗೆ ಅಡ್ಡಲಾಗಿ 15 ಮೆಗಾವ್ಯಾಟ್ ಸಾಮರ್ಥ್ಯದ ಕಿರು ಜಲ ವಿದ್ಯುತ್ ಯೋಜನೆಯನ್ನು ಹಂಚಿಕೆ ಮಾಡಲಾಗಿದೆ.

2. ಸದರಿ ಯೋಜನೆಯನ್ನು ಮೆ: ಸಾಗರ್ ಪವರ್ (ನೀರುಕಟ್ಟೆ) ಪ್ರೈವೇಟ್ ಲಿಮಿಟೆಡ್ ಎಂಬ ಕಂಪನಿಯ ಹೆಸರಿನಲ್ಲಿ ಅನುಷ್ಠಾನ ಮಾಡಲು ಮೇಲೆ (2)ರಲ್ಲಿ ಓದಲಾದ ಪತ್ರದಲ್ಲಿ ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತದ ವ್ಯವಸ್ಥಾಪಕ ನಿರ್ದೇಶಕರು ಸರ್ಕಾರಕ್ಕೆ ಶಿಫಾರಸ್ಸು ಮಾಡಿರುವ ಹಿನ್ನೆಲೆಯಲ್ಲಿ ಈ ಕೆಳಗಿನಂತೆ ಆದೇಶಿಸಲಾಗಿದೆ.

**ಸರ್ಕಾರಿ ಆದೇಶ ಸಂಖ್ಯೆ: ಇಂಇ 338 ಎನ್‌ಸಿಇ 2004, ಬೆಂಗಳೂರು ದಿನಾಂಕ: 12ನೇ ಅಕ್ಟೋಬರ್ 2004**

3. ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳನ್ನು ಕೂಲಂಕಷವಾಗಿ ಪರಿಶೀಲಿಸಿದ ನಂತರ, ಸರ್ಕಾರವು ಮೇಲೆ (1)ರಲ್ಲಿ ಓದಲಾದ ಆದೇಶದಲ್ಲಿ ಮೇ ಸಾಗರ್ ಪವರ್ ಲಿಮಿಟೆಡ್ ಕಂಪನಿಗೆ ದಕ್ಷಿಣ ಕನ್ನಡ ಜಿಲ್ಲೆಯ ಪುತ್ತೂರು ತಾಲ್ಲೂಕಿನ ನೀರುಕಟ್ಟೆ ಗ್ರಾಮದ ಬಳಿ ನೇತ್ರಾವತಿ ನದಿಗೆ ಅಡ್ಡಲಾಗಿ ಹಂಚಿಕೆ ಮಾಡಲಾದ 15 ಮೆಗಾವ್ಯಾಟ್ ಸಾಮರ್ಥ್ಯದ ಕಿರು ಜಲ ವಿದ್ಯುತ್ ಯೋಜನೆಯನ್ನು ಮೇ ಸಾಗರ್ ಪವರ್ (ನೀರುಕಟ್ಟೆ) ಪ್ರೈವೇಟ್ ಲಿಮಿಟೆಡ್ ಎಂಬ ಕಂಪನಿಯ ಹೆಸರಿನಲ್ಲಿ ಅನುಷ್ಠಾನ ಮಾಡಲು ಅನುಮತಿ ನೀಡಿದೆ.

4. ಮೇಲೆ (1)ರಲ್ಲಿ ಓದಲಾದ ದಿನಾಂಕ: 11.11.98ರ ಮೂಲ ಹಂಚಿಕೆ ಆದೇಶದ ಇತರ ನಿಬಂಧನೆಗಳು ಯಥಾವತ್ತಾಗಿ ಮುಂದುವರಿಯುತ್ತವೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಕೆ. ಎಲ್. ಜಯರಾಂ**

ಪಿ.ಆರ್.1171 ಸರ್ಕಾರದ ಅಧೀನ ಕಾರ್ಯದರ್ಶಿ, ಇಂಧನ ಇಲಾಖೆ.

**ವಿಷಯ :** ಮೇ ಶಿಬಾನಿ ಪವರ್ ಪ್ರೈವೇಟ್ ಲಿಮಿಟೆಡ್ ಕಂಪನಿಗೆ ಹಂಚಿಕೆಯಾಗಿರುವ 0.5 ಮೆಗಾವ್ಯಾಟ್ ಸಾಮರ್ಥ್ಯದ ಕುಂದಿಯಾನ ಕಿರು ಜಲ ವಿದ್ಯುತ್ ಯೋಜನೆಯನ್ನು 2.00 ಮೆಗಾವ್ಯಾಟ್‌ಗೆ ಹೆಚ್ಚಿಸುವ ಬಗ್ಗೆ ಆದೇಶ.

**ಓದಲಾಗಿದೆ :** 1. ಸರ್ಕಾರಿ ಆದೇಶ ಸಂಖ್ಯೆ: ಇಂಇ 232 ಎನ್‌ಸಿಇ 2002 ದಿನಾಂಕ: 10.10.2002.

2. ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತದ ವ್ಯವಸ್ಥಾಪಕ ನಿರ್ದೇಶಕರ ಪತ್ರ ಸಂಖ್ಯೆ: ಕೆಆರ್‌ಇಡಿ:06:ಪುದಿಯ/2004/1772 ದಿನಾಂಕ: 25.9.2004.

**ಪ್ರಸ್ತಾವನೆ:**

ಮೇಲೆ (1)ರಲ್ಲಿ ಓದಲಾದ ಸರ್ಕಾರಿ ಆದೇಶದಲ್ಲಿ ಮೇ ಶಿಬಾನಿ ಪವರ್ ಪ್ರೈವೇಟ್ ಲಿಮಿಟೆಡ್ ಕಂಪನಿಗೆ ದಕ್ಷಿಣ ಕನ್ನಡ ಜಿಲ್ಲೆಯ ಬೆಳ್ತಂಗಡಿ ತಾಲ್ಲೂಕಿನ ಪುದಿಯಾ ತೊರೆಗೆ ಅಡ್ಡಲಾಗಿ 0.5 ಮೆಗಾವ್ಯಾಟ್ ಸಾಮರ್ಥ್ಯದ ಕಿರು ಜಲ ವಿದ್ಯುತ್ ಯೋಜನೆಯನ್ನು ಹಂಚಿಕೆ ಮಾಡಲಾಗಿದೆ.

2. ಹಂಚಿಕೆಯಾಗಿರುವ ಸ್ಥಳದಲ್ಲಿ ನೀರಿನ ಹರಿವು 4 ಕ್ಯೂಮೆಕ್ಸ್‌ನಿಂದ 8 ಕ್ಯೂಮೆಕ್ಸ್ ಮತ್ತು ಎತ್ತರ 20 ಮೀಟರಿನಿಂದ 34 ಮೀಟರ್ ಇರುವುದರಿಂದ, ಸಾಮರ್ಥ್ಯವನ್ನು 0.5 ಮೆಗಾವ್ಯಾಟ್‌ನಿಂದ 2.00 ಮೆಗಾವ್ಯಾಟ್‌ಗೆ ಹೆಚ್ಚಿಸಲು ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತದ ವ್ಯವಸ್ಥಾಪಕ ನಿರ್ದೇಶಕರು ಮೇಲೆ ಓದಲಾದ (2)ರ ಪತ್ರದಲ್ಲಿ ಸರ್ಕಾರಕ್ಕೆ ಶಿಫಾರಸ್ಸು ಮಾಡಿರುವ ಹಿನ್ನೆಲೆಯಲ್ಲಿ ಈ ಆದೇಶ.

**ಸರ್ಕಾರಿ ಆದೇಶ ಸಂಖ್ಯೆ: ಇಂಇ 334 ಎನ್‌ಸಿಇ 2004, ಬೆಂಗಳೂರು, ದಿನಾಂಕ: 12ನೇ ಅಕ್ಟೋಬರ್ 2004**

3. ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳನ್ನು ಕೂಲಂಕಷವಾಗಿ ಪರಿಶೀಲಿಸಿದ ನಂತರ, ಸರ್ಕಾರವು ಮೇ ಶಿಬಾನಿ ಪವರ್ ಪ್ರೈವೇಟ್ ಲಿಮಿಟೆಡ್ ಕಂಪೆನಿಗೆ ದಕ್ಷಿಣ ಕನ್ನಡ ಜಿಲ್ಲೆಯ ಬೆಳ್ತಂಗಡಿ ತಾಲ್ಲೂಕಿನ ಕುಂದಿಯಾನ ಗ್ರಾಮದ ಬಳಿ ಸುದಿಯಾ ತೊರೆಗೆ ಅಡ್ಡಲಾಗಿ ಮೇಲೆ (1)ರಲ್ಲಿ ಓದಲಾದ ಆದೇಶದಲ್ಲಿ ಹಂಚಿಕೆ ಮಾಡಲಾದ 0.5 ಮೆಗಾವ್ಯಾಟ್ ಸಾಮರ್ಥ್ಯದ ಕುಂದಿಯಾನ ಕಿರು ಜಲ ವಿದ್ಯುತ್ ಯೋಜನೆಯ ಸಾಮರ್ಥ್ಯವನ್ನು 2.00 ಮೆಗಾವ್ಯಾಟ್‌ಗೆ ಹೆಚ್ಚಿಸಿ ಅನುಷ್ಠಾನ ಮಾಡಲು ಅನುಮತಿ ನೀಡಲಾಗಿದೆ.

4. ಮೇಲೆ (1) ರಲ್ಲಿ ಓದಲಾದ ದಿನಾಂಕ: 10.10.2002ರ ಮೂಲ ಹಂಚಿಕೆ ಆದೇಶದ ಇತರ ನಿಬಂಧನೆಗಳು ಯಥಾವತ್ತಾಗಿ ಮುಂದುವರಿಯುತ್ತವೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್.1172

**ಕೆ. ಎಲ್. ಜಯರಾಂ**

ಸರ್ಕಾರದ ಅಧೀನ ಕಾರ್ಯದರ್ಶಿ, ಇಂಧನ ಇಲಾಖೆ.

## ಶಿಕ್ಷಣ ಸಚಿವಾಲಯ

**ವಿಷಯ :** ಶ್ರೀ ವಿ. ಬಿ. ಪಾಟೀಲ್, ಮುಖ್ಯ ಗ್ರಂಥಾಲಯಾಧಿಕಾರಿ, ಶ್ರೀ ಕೃಷ್ಣರಾಜೇಂದ್ರ ಕೇಂದ್ರ ಗ್ರಂಥಾಲಯ, ಚಿತ್ರದುರ್ಗ, ಇವರು ಸರ್ಕಾರಿ ಕೆಲಸ ಕಾರ್ಯದಲ್ಲಿ ನಿರ್ಲಕ್ಷತೆ ತೋರಿಸಿ, ಸರ್ಕಾರಿ ಅಧಿಕಾರ ಸ್ಥಾನಕ್ಕೆ ಅನುಚಿತವಾಗಿ ನಡೆದುಕೊಂಡು ಕರ್ತವ್ಯಲೋಪ ಎಸಗಿರುವ ಪ್ರಯುಕ್ತ ಇವರ ವಿರುದ್ಧ ಶಿಸ್ತು ಕ್ರಮ ಕೈಗೊಳ್ಳುವ ಬಗ್ಗೆ-ಅಮಾನತ್ತು ಆದೇಶಗಳು.

**ಓದಲಾಗಿದೆ :** 1. ಜಿಲ್ಲಾಧಿಕಾರಿ ಮತ್ತು ಜಿಲ್ಲಾ ದಂಡಾಧಿಕಾರಿ, ಚಿತ್ರದುರ್ಗ ಜಿಲ್ಲೆ, ಚಿತ್ರದುರ್ಗ ಅವರ ದಿನಾಂಕ: 17.6.2004ರ ಅ.ಸ.ಪ ಸಂ:ಸಿಸಿಎ: ಸಿಆರ್:3:2004-05.

**ಪ್ರಸ್ತಾವನೆ:**

ಮೇಲೆ ಓದಲಾದ ದಿನಾಂಕ: 17.6.2004 ರ ಪತ್ರದಲ್ಲಿ ಜಿಲ್ಲಾಧಿಕಾರಿ ಮತ್ತು ಜಿಲ್ಲಾ ದಂಡಾಧಿಕಾರಿ, ಚಿತ್ರದುರ್ಗ ಜಿಲ್ಲೆ, ಚಿತ್ರದುರ್ಗ, ಅವರು ಚಿತ್ರದುರ್ಗದ ಮುಖ್ಯ ಗ್ರಂಥಾಲಯಾಧಿಕಾರಿಯವರ ಹಾಗೂ ಸಿಬ್ಬಂದಿಯ ಮೇಲೆ ಬಂದ ದೂರಿನ ಪರಿಶೀಲನೆ ಮಾಡಲು ದಿನಾಂಕ: 17.6.2004 ರಂದು ಅನಿರೀಕ್ಷಿತವಾಗಿ ಡಿಡಿಪಿಐ, ಚಿತ್ರದುರ್ಗ, ಅವರೊಡನೆ ಜಿಲ್ಲಾ ಗ್ರಂಥಾಲಯಕ್ಕೆ ಭೇಟಿ ನೀಡಿದಾಗ, ಈ ಕೆಳಕಂಡ ಲೋಪದೋಷಗಳು ಕಂಡು ಬಂದಿವೆಯೆಂದು ವರದಿ ಮಾಡಿರುತ್ತಾರೆ.

1. ಮುಖ್ಯ ಗ್ರಂಥಾಲಯಾಧಿಕಾರಿಯವರು ಕೇಂದ್ರ ಸ್ಥಾನದಲ್ಲಿ ವಾಸವಿಲ್ಲದೇ ಹುಬ್ಬಳ್ಳಿಯಲ್ಲಿ ವಾಸವಾಗಿರುವುದು.
2. ನಿಯಮಿತವಾಗಿ ಗ್ರಂಥಾಲಯಕ್ಕೆ ಹಾಜರಾಗುತ್ತಿಲ್ಲದಿರುವುದು. ಇದರಿಂದ ಗ್ರಂಥಾಲಯದಲ್ಲಿ ಅವ್ಯವಸ್ಥೆ ಉಂಟಾಗಿರುವುದು;
3. ಮುಖ್ಯ ಗ್ರಂಥಾಲಯಾಧಿಕಾರಿ ಶ್ರೀ ವಿ. ವಿ. ಪಾಟೀಲ್ ಅವರು ತಮಗಿಷ್ಟ ಬಂದಂತೆ ಗ್ರಂಥಾಲಯಕ್ಕೆ ಬರುವುದು ಹಾಗೂ ಆಡಳಿತ ವ್ಯವಹಾರಗಳಲ್ಲಿ ಅಧೀನ ನೌಕರರಿಗೆ ರಜೆ ಮಂಜೂರು ಮಾಡದೇ ವೇತನ ಪಾವತಿಸುವುದು ಹಾಗೂ ಹಾಜರಾತಿ ವಹಿಯಲ್ಲಿ ಆಕಸ್ಮಿಕ ರಜೆ ಎಂದು ಗುರುತು ಮಾಡಿದ್ದು, ರಜೆ ಮಂಜೂರಾದ ಬಗ್ಗೆ ವಹಿಯಲ್ಲಿ ದಾಖಲಾತಿ ಇಲ್ಲದಿರುವುದು ಹಾಗೂ ರಜೆ ಮನವಿ ಪತ್ರ ಇಲ್ಲದಿರುವುದು;
4. ದಿನಾಂಕ: 4.9.2003 ರಂದು ಬೆಂಗಳೂರಿನಿಂದ ಉಚಿತವಾಗಿ ಸರಬರಾಜು ಮಾಡಿದ ಪುಸ್ತಕಗಳನ್ನು ದಾಸ್ತಾನಿಗೆ ತೆಗೆದುಕೊಂಡಿದ್ದು, ಇವನ್ನು ತಾಲ್ಲೂಕು ಕೇಂದ್ರಗಳಿಗೆ ಹಂಚಿಕೆ ಮಾಡಿ 14.6.2004 ರವರೆಗೆ ವಿತರಣೆ ಮಾಡದೇ ಇರುವುದು;
5. ಕನ್ನಡ ಮತ್ತು ಸಂಸ್ಕೃತಿ ಇಲಾಖೆಯ ನಿವೃತ್ತ ಉಪನಿರ್ದೇಶಕರಾದ ಶ್ರೀ ವೆಂಕಣ್ಣಾಚಾರ್ ಅವರು 2 ತಿಂಗಳ ಹಿಂದೆಯೇ ದಾನವಾಗಿ ನೀಡಿದ ನೂರಾರು ಪುಸ್ತಕಗಳನ್ನು ದಾಸ್ತಾನಿಗೆ ತೆಗೆದುಕೊಂಡಿಲ್ಲದಿರುವುದು ಹಾಗೂ ವಿತರಿಸದಿರುವುದು;
6. ಗ್ರಂಥಾಲಯದ ಸಹಾಯಕ ಗ್ರಂಥಪಾಲಕರಾದ ಶ್ರೀ ವೈ. ಬಿ. ಜಲಗಣ್ಣನವರ್ ಅವರು ತಮ್ಮ ಹುದ್ದೆಗೆ ತಕ್ಕದಲ್ಲದ ಕರ್ತವ್ಯ ವಹಿಸಿರುವುದು; ಗ್ರಂಥಾಲಯದಲ್ಲಿ ಅವರು ನಗದು ಪುಸ್ತಕ ನಿರ್ವಹಣೆ, ವೋಚರ್ ಕಾಪಾಡುವ ವ್ಯವಸ್ಥೆ ಮಾಡುತ್ತಿರುವುದು;

7. ಏಪ್ರಿಲ್ 2004ರ ಹಾಜರಾತಿಯಲ್ಲಿ 23 ಜನ ಕೆಲಸ ಮಾಡುತ್ತಿದ್ದು, ವೇತನ ಬಟವಾಡೆಯಲ್ಲಿ 30 ಜನರಿಗೆ ವೇತನ ಪಾವತಿಸಿರುವ ದಾಖಲೆ ಇರುವುದು;
8. ಬೆಂಗಳೂರಿನ ಜನವಾಹಿನಿ ಪತ್ರಿಕೆಯ ಬಿಲ್ಲನ್ನು ದಿನಾಂಕ: 1.4.2003 ರಿಂದ ಪಾವತಿ ಮಾಡದಿರುವುದು; ಆದರೆ ಪೇಪರ್ ಸರಬರಾಜು ಮಾಡಿದ ಬಗ್ಗೆ ಹಾಜರಿ ವಹಿಯಲ್ಲಿ ದಾಖಲಾಗಿರುವುದು.
9. ರಜೆ ಮಂಜೂರಾಗದಿದ್ದರೂ ಗ್ರಂಥಾಲಯ ಸಿಬ್ಬಂದಿಯವರಿಗೆ ವೇತನ ಪಾವತಿಸಿರುವುದು; ಹಾಗೂ ಹಾಜರಾತಿಯ ವಹಿಯಲ್ಲಿ ನಮೂದಿಸದೇ ಇರುವುದು;
10. ಪ್ರತಿ ವರ್ಷ ಮಾರ್ಚಿ 31ಕ್ಕೆ ದಾಸ್ತಾನು ಪರಿಶೀಲನೆ ದೃಢೀಕರಣ ಮಾಡಬೇಕಾಗಿದ್ದು, ಇವರು ಬಂದಾಗಿನಿಂದ ದೃಢೀಕರಣ ಮಾಡದೇ ಇರುವುದು;
11. ಗ್ರಂಥಾಲಯ ಪುಸ್ತಕಗಳ ವರ್ಗೀಕರಣದ ಬಗ್ಗೆ ತಪಾಸಣೆ: ಮಾರ್ಗದರ್ಶನ ನೀಡದೇ ಇರುವುದು;
12. 2003-04ನೇ ಸಾಲಿನಲ್ಲಿ 23,027 ಮೊತ್ತದ ಪುಸ್ತಕ ಖರೀದಿಸಿದ್ದು, ಇದನ್ನು ನಗದು ಪುಸ್ತಕಕ್ಕೆ ತೆಗೆದುಕೊಂಡಿಲ್ಲದಿರುವುದು.

ಮೇಲೆ ವಿವರಿಸಿದ ಕಾರಣಗಳ ಹಿನ್ನಲೆಯಲ್ಲಿ ಹಲವಾರು ಅವ್ಯವಹಾರಗಳು ಮತ್ತು ಹಣಕಾಸಿನ ಲೋಪದೋಷಗಳು ಗತಿಸಿರುವುದು ಮೇಲ್ನೋಟಕ್ಕೆ ಕಂಡುಬಂದಿರುವುದರಿಂದ ಗ್ರಂಥಾಲಯದ 5 ವರ್ಷಗಳ ಸಮಗ್ರ ಲೆಕ್ಕಪರಿಶೋಧನೆ ಅಗತ್ಯವೆಂದು ಭಾವಿಸಿ, ಇದನ್ನು ಆಡಿಟ್ ಮಾಡಿಸಲು ಸಹಾಯಕ ನಿಯಂತ್ರಕರು, ಲೆಕ್ಕಪರಿಶೋಧನಾ ವರ್ತುಲ, ಚಿತ್ರದುರ್ಗ, ಅವರಿಗೆ ಪತ್ರ ಬರೆದಿರುವುದಾಗಿ ತಿಳಿಸಿ, ಶ್ರೀ ವಿ. ಬಿ. ಪಾಟೀಲ್, ಮುಖ್ಯ ಗ್ರಂಥಾಲಯಾಧಿಕಾರಿ, ಕೃಷ್ಣರಾಜೇಂದ್ರ ಕೇಂದ್ರ ಗ್ರಂಥಾಲಯ, ಚಿತ್ರದುರ್ಗ, ಅವರನ್ನು ಶಿಸ್ತು ಕ್ರಮ ಬಾಕಿಯಿರಿಸಿ ಅಮಾನತ್ತಿನಲ್ಲಿರಿಸಲು ಶಿಫಾರಸ್ಸು ಮಾಡಿರುತ್ತಾರೆ. ಇದನ್ನು ಪರಿಗಣಿಸಿ ಸರ್ಕಾರ ಈ ಕೆಳಗಿನಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಇಡಿ 112 ಡಿಜಿಟಿ 2004 ಬೆಂಗಳೂರು, ದಿನಾಂಕ: 19ನೇ ಅಕ್ಟೋಬರ್ 2004**

ಪ್ರಸ್ತಾವನೆಯಲ್ಲಿ ವಿವರಿಸಿದ ಕಾರಣಗಳ ಹಿನ್ನಲೆಯಲ್ಲಿ ಕೆಸಿಎಸ್ (ಸಿಸಿಎ) ನಿಯಮಾವಳಿಗಳು 1957ರ ನಿಯಮ 10 (1)(ಎ) ರಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಶ್ರೀ ವಿ.ಬಿ. ಪಾಟೀಲ್, ಮುಖ್ಯ ಗ್ರಂಥಾಲಯಾಧಿಕಾರಿ, ಚಿತ್ರದುರ್ಗ ಜಿಲ್ಲೆ, ಚಿತ್ರದುರ್ಗ, ಇವರ ಆರೋಪಗಳ ಬಗ್ಗೆ ಶಿಸ್ತು ಕ್ರಮ ಬಾಕಿ ಇರಿಸಿ ತಕ್ಷಣದಿಂದ ಜಾರಿಗೆ ಬರುವಂತೆ ಅಮಾನತ್ತಿನಲ್ಲಿಟ್ಟು ಆದೇಶಿಸಿದೆ.

ಮೇಲ್ಕಂಡ ಅಧಿಕಾರಿಯು ಕೆಸಿಎಸ್ ನಿಯಮಾವಳಿಗಳು 1958ರ ನಿಯಮ 98 ರ ಮೇರೆಗೆ ಜೀವನಧಾರ ಭತ್ಯೆ ಪಡೆಯಲು ಅರ್ಹರಿರುವರು ಹಾಗೂ ಅಮಾನತ್ತಿನ ಅವಧಿಯಲ್ಲಿ ಸಕ್ರಮ ಪ್ರಾಧಿಕಾರದ ಪೂರ್ವಾನುಮತಿ ಇಲ್ಲದೆ ಕೇಂದ್ರ ಸ್ಥಾನ ಬಿಡತಕ್ಕದ್ದಲ್ಲ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್.1173

**ಎಫ್. ಆರ್. ಸಂಬರಗಿ**

ಸರ್ಕಾರದ ಅಧೀನ ಕಾರ್ಯದರ್ಶಿ, ಶಿಕ್ಷಣ ಇಲಾಖೆ(ಸೇ1,2).

**ಒಳಾಡಳಿತ ಸಚಿವಾಲಯ**

**ವಿಷಯ :** ಶ್ರೀ ಹೆಚ್. ಎನ್. ಮಹಾಬಲೇಶ್ವರಪ್ಪ, ಸಿ.ಪಿ.ಐ ವಾಡಿ ರೈಲ್ವೆ ಸರ್ಕಲ್ ರವರು ಸರ್ಕಾರಕ್ಕೆ ಸಲ್ಲಿಸಿರುವ ಪರಿಷ್ಕರಣ ಮೇಲ್ಮನವಿ ಅರ್ಜಿಯ ಬಗ್ಗೆ.

**ಓದಲಾಗಿದೆ :**
1. ಐಜಿಪಿ, ಈಶಾನ್ಯ ವಲಯ, ಗುಲ್ಬರ್ಗಾರವರ ಅಸಂ: ಇವಿ:6: ಈವ:02 ಅಸಂ:656: ಈವ:02 ದಿನಾಂಕ: 25.12.02.
2. ಮಹಾ ನಿರ್ದೇಶಕರು ಮತ್ತು ಆರಕ್ಷಕ ಮಹಾ ನಿರೀಕ್ಷಕರು ರವರ ಅಸಂ: ಸಿಬಿ: 8:331 2002-03 ದಿನಾಂಕ: 7.11.2003.
3. ಅರ್ಜಿದಾರರ ಮನವಿ ದಿನಾಂಕ: 26.12.2003
4. ಮಹಾ ನಿರ್ದೇಶಕರು ಮತ್ತು ಆರಕ್ಷಕ ಮಹಾ ನಿರೀಕ್ಷಕರವರ ಪತ್ರ ಸಂ ಸಿಬಿ (8) 33: 2002-03 ದಿನಾಂಕ: 22.5.2004

**ಪ್ರಸ್ತಾವನೆ:**

ಶ್ರೀ ಹೆಚ್. ಎಸ್. ಮಹಾಬಲೇಶ್ವರಪ್ಪ, ಪಿ.ಐ. ರೈಲ್ವೇಸ್ ವಾಡಿ (ಇನ್ನು ಮುಂದೆ ಅರ್ಜಿದಾರರೆಂದ ಕರೆಯಲ್ಪಡುವ) ರವರ ವಿರುದ್ಧ ಈ ಕೆಳಕಂಡ ದೋಷಾರೋಪಕ್ಕಾಗಿ ಕರ್ನಾಟಕ ರಾಜ್ಯ ಪೊಲೀಸ್ (ಶಿಸ್ತು ನಡವಳಿ) ನಿಯಮಾವಳಿ 1965ರ ನಿಯಮ 7 ರಡಿ ಶಿಸ್ತು ಕ್ರಮ ಜರುಗಿಸಲಾಗಿದೆ.

**ದೋಷಾರೋಪ:**

1) "ಶ್ರೀ ಹೆಚ್. ಎಸ್. ಮಹಾಬಲೇಶ್ವರಪ್ಪ, ಪಿ. ಐ. ರವರು ಗಂಗಾವತಿ ನಗರ ಠಾಣೆಯ ವ್ಯಾಪ್ತಿಯಲ್ಲಿ ಸ್ವತ್ತಿನ ಅಪರಾಧಗಳನ್ನು ತಡೆಗಟ್ಟುವಲ್ಲಿ ವಿಫಲವಾಗಿ ಸಾರ್ವಜನಿಕರ ಆಸ್ತಿಪಾಸ್ತಿಯ ಸಂರಕ್ಷಣೆ ಮಾಡುವಲ್ಲಿ ವಿಫಲರಾಗಿ ಕರ್ತವ್ಯ ನಿರ್ಲಕ್ಷತೆ ಹಾಗೂ ಬೇಜವಾಬ್ದಾರಿತನದ ಬಗ್ಗೆ.
2) ಸ್ವತ್ತಿನ ಪ್ರಕರಣಗಳಾದ ಗುನ್ನೆ ಸಂ. 10:2002 ಕಲಂ 380 ಐಪಿಸಿ ಗುನ್ನೆ ಸಂ: 14:2002 ಕಲಂ 457, 380 ಐಪಿಸಿ ಗುನ್ನೆ ಸಂ: 17:2002 ಕಲಂ 295, 380 ಐಪಿಸಿ ಮತ್ತು ಗುನ್ನೆ 24:2002 ಕಲಂ 454-457-380 ಐಪಿಸಿ ಪ್ರಕರಣಗಳಲ್ಲಿ ಪ್ರಾಮಾಣಿಕ ಪ್ರಯತ್ನ ಮಾಡದೇ ಪ್ರಕರಣ ವರದಿಯಾದ 3 ರಿಂದ 6 ತಿಂಗಳ ಒಳಗಾಗಿ 'ಸಿ' ವರದಿಯನ್ನು ಸಲ್ಲಿಸಿ ಕರ್ತವ್ಯ ನಿರ್ಲಕ್ಷತನ ಮತ್ತು ಬೇಜವಾಬ್ದಾರಿತನ ಪ್ರದರ್ಶಿಸಿದ್ದು.
3) ಗುನ್ನೆ ಸಂ: 33:2002 ಸಂ: 384 ಐಪಿಸಿ ಗುನ್ನೆ ಸಂ: 34: 2002 ಕಲಂ 393 ಐಪಿಸಿ ಮತ್ತು ಗುನ್ನೆ ಸಂ: 49: 2002 457, 511 ಐಪಿಸಿ ಪ್ರಕರಣಗಳಲ್ಲಿ ಫಿರ್ಯಾದುದಾರರ ಹೇಳಿಕೆಯ ಮೇಲೆ ಪ್ರಕರಣ ದಾಖಲಾಗಿದ್ದು ಇವುಗಳನ್ನು ಮುಚ್ಚಿಡಿಸುವ ಸಲುವಾಗಿ ಫಿರ್ಯಾದುದಾರರು ಮರು ಹೇಳಿಕೆ ಪಡೆದು ತಪ್ಪು ಕಲ್ಪನೆಯಿಂದ ಫಿರ್ಯಾದು ನೀಡಿದಂತೆ ತೋರಿಸಿ ಅವುಗಳಲ್ಲಿ 'ಬಿ' ಅಂತಿಮ ವರದಿಯನ್ನು ಸಲ್ಲಿಸಿದ್ದು ಒಂದು ವೇಳೆ ಫಿರ್ಯಾದುದ್ದಾರರು ಕೆಟ್ಟ ದೃಷ್ಟಿಯಿಂದ ಫಿರ್ಯಾದು ನೀಡದೆ ಅವರ ವಿರುದ್ದ ಯಾವುದೇ ಕ್ರಮ ಜರುಗಿಸದೇ ಪ್ರಕರಣಗಳನ್ನು ಮುಚ್ಚಿಹಾಕಲು ಪ್ರಯತ್ನಿಸಿ ಕರ್ತವ್ಯ ನಿರ್ಲಕ್ಷ್ಯತೆ ಪ್ರದರ್ಶಿಸಿದುದ್ದು.

4) ಆಪಾದಿತ ಪೊಲೀಸ್ ಅಧಿಕಾರಿ ರವರು ಜವಾಬ್ದಾರಿಯುತ ಅಧಿಕಾರಿಯಾಗಿದ್ದು, ತಾನು ಠಾಣೆಯಲ್ಲಿದ್ದಾಗ ಮುತುವರ್ಜಿ ವಹಿಸಿ ಪ್ರಕರಣಗಳನ್ನು ದಾಖಲಿಸಿ ಅವುಗಳ ತನಿಖೆಯ ಬಗ್ಗೆ ವೈಯಕ್ತಿಕ ಗಮನಹರಿಸಿ ಕೂಡಲೇ ಕಾರ್ಯೋನ್ಮುಖಿವಾಗಿ ಪ್ರಕರಣಗಳ ತನಿಖೆಗಾಗಿ ಸಹ ಸಿಬ್ಬಂದಿಯವರಿಗೆ ಸೂಕ್ತ ಸಲಹೆ ಸೂಚನೆ ಕೊಡುವಲ್ಲಿ ವಿಫಲರಾಗಿ ತನಿಖಾವಸ್ಥೆಯಲ್ಲಿರುವ 15 ಸ್ವತ್ತಿನ ಪ್ರಕರಣಗಳಲ್ಲಿ ವಿಶೇಷ ಆಸಕ್ತಿಯನ್ನು ತೋರಿಸಿ ತನಿಖೆ ಕೈಗೊಳ್ಳದೇ ಕರ್ತವ್ಯದಲ್ಲಿ ಅತೀವ ನಿರ್ಲಕ್ಷ್ಯತನ ಹಾಗೂ ಬೇಜವಾಬ್ದಾರಿತನ ತೋರಿಸಿದ ಬಗ್ಗೆ"

ಮೇಲ್ಕಂಡ ಆರೋಪದ ಬಗ್ಗೆ ಅರ್ಜಿದಾರರ ಸಮಜಾಯಿಷಿಯನ್ನೊಪ್ಪದ ಶಿಸ್ತು ಪ್ರಾಧಿಕಾರಿ ಮೇಲೆ 1 ರಲ್ಲಿ ಓದಲಾದ ಆದೇಶದಲ್ಲಿ ಅರ್ಜಿದಾರರ ಮುಂದಿನ ವಾರ್ಷಿಕ ವೇತನ ಬಡ್ತಿಯನ್ನು ಸಂಚಿತಪರಿಣಾಮ ರಹಿತವಾಗಿ 6 ತಿಂಗಳ ಕಾಲ ಮುಂದೂಡಿರುತ್ತಾರೆ.

ಈ ಆದೇಶದ ವಿರುದ್ದ ಸಲ್ಲಿಸಿದ ಮೇಲ್ಮನವಿಯಲ್ಲಿ ಸತ್ಯಾಂಶವಿಲ್ಲವೆಂದು ಮೇಲೆ (2)ರಲ್ಲಿ ಓದಲಾದ ಆದೇಶದಲ್ಲಿ ಮೇಲ್ಮನವಿಯನ್ನು ತಿರಸ್ಕರಿಸಿರುತ್ತಾರೆ.

ಈ ಎರಡು ಆದೇಶಗಳ ವಿರುದ್ಧ ಅರ್ಜಿದಾರರು ಸರ್ಕಾರಕ್ಕೆ ಸಲ್ಲಿಸಿರುವ ಪರಿಷ್ಕರಣಾ ಮೇಲ್ಮನವಿ ಅರ್ಜಿಯನ್ನು ಇಲಾಖಾ ವಿಚಾರಣಾ ದಾಖಲೆಗಳೊಂದಿಗೆ ಪರಿಶೀಲಿಸಲಾಗಿದೆ. ಅದರ ಮುಖ್ಯ ವಾದಾಂಶಗಳು ಈ ಕೆಳಕಂಡಂತಿವೆ.

1) ನಿಯಮ 6 ರಡಿ ಇಲಾಖಾ ವಿಚಾರಣೆ ನಡೆಸಬೇಕಾಗಿತ್ತು.
2) ಪೂರ್ವಭಾವಿ ವಿಚಾರಣೆ ನಡೆಸದೇ ನಿಯಮ 7 ರಡಿ ಶಿಸ್ತು ಕ್ರಮ ಜರುಗಿಸಿರುವುದು ಸರಿಯಲ್ಲ
3) ಗಂಗಾವತಿಯ ಎಂ.ಎಲ್.ಎ. ರವರ ಮನೆ ದರೋಡೆಯ ಘಟನೆಯ ಆಧಾರದ ಮೇಲೆ ತಮ್ಮ ಕರ್ತವ್ಯದ ಹಿರಿಮೆಯನ್ನು ಪರಿಗಣಿಸದೇ ವಿನಾಕಾರಣ ಎಸ್. ಪಿ. ರವರು ಐಜಿಪಿ ರವರಿಗೆ ವರದಿ ಸಲ್ಲಿಸಿ ಶಿಸ್ತು ಕ್ರಮಕ್ಕೆ ಕಾರಣರಾಗಿರುತ್ತಾರೆ.
4) ತನ್ನ ಸೇವಾವಧಿಯಲ್ಲಿ ತನಗೆ ಅನೇಕ ಪ್ರಶಂಸೆಗಳು ದೊರೆತ್ತಿದ್ದು ತನ್ನ ಸೇವಾ ತತ್ಪರತೆಯನ್ನು ತೋರಿಸುತ್ತದೆ.
5) ಎಂ.ಎಲ್.ಎ ರವರು ಮನೆ ದರೋಡೆ ಪ್ರಕರಣವಾಗಿದ್ದು ಶ್ರೀ ಲಿಂಗಪ್ಪ ಶೆಟ್ಟರವರ ಮನೆ ಪ್ರಕರಣ ಕಳ್ಳತನವಾಗಿದೆ. ದರೋಡೆ ಅಲ್ಲ ಉಳಿದಂತೆ ವಾದಾಂಶಗಳು ಪುನರಾವರ್ತನೆಯಾಗಿದೆ.

ಯಾವ ನಿಯಮದಡಿ ಶಿಸ್ತು ಕ್ರಮ ಜರುಗಿಸಬೇಕೆನ್ನುವುದು ಶಿಸ್ತು ಪ್ರಾಧಿಕಾರಿಯ ವಿವೇಚನೆಗೆ ಬಿಟ್ಟ ವಿಷಯ ಪೂರ್ವ ಭಾವಿ ವಿಚಾರಣೆ ನಡೆಸಬೇಕೇ ಬೇಡವೇ ಎಂದು ನಿರ್ಧರಿಸುವುದು ಶಿಸ್ತು ಪ್ರಾಧಿಕಾರಿಯ ಅಧಿಕಾರ ಅದನ್ನು ಪ್ರಶ್ನಿಸುವ ಹಕ್ಕು ಅರ್ಜಿದಾರರಿಗೆ ಇರುವುದಿಲ್ಲ ಮೇಲ್ಮನವಿಯಲ್ಲಿ ಸಲ್ಲಿಸಿದ ವಾದಾಂಶಗಳನ್ನು ಇಲ್ಲಿಯೂ ಪುನರಾವರ್ತಿಸಿದ್ದು, ಮೇಲ್ಮನವಿ ಪ್ರಾಧಿಕಾರಿ ಸದರಿ ವಾದಾಂಶಗಳ ಬಗ್ಗೆ ಸುದೀರ್ಘವಾಗಿ ಚರ್ಚಿಸಿರುತ್ತಾರೆ ಹೊಸ ಅಂಶಗಳನ್ನು ಯಾವುದನ್ನೂ ಅರ್ಜಿದಾರರು ಮಂಡಿಸಿರುವುದಿಲ್ಲ ಆದ್ದರಿಂದ ಸರ್ಕಾರವು ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರಿ ಆದೇಶ ಸಂ: ಒಇ 30 ಪೊಸಿಅ 2004 ದಿನಾಂಕ: 4ನೇ ಅಕ್ಟೋಬರ್ 2004**

ಪ್ರಸ್ತಾವನೆಯಲ್ಲಿ ವಿವರಿಸಿರುವ ಪ್ರಕರಣಗಳಿಂದಾಗಿ ಕರ್ನಾಟಕ ರಾಜ್ಯ ಪೊಲೀಸ್ (ಶಿಸ್ತು ನಡವಳಿ) ನಿಯಮಾವಳಿ 1965 ರಡಿ ಸರ್ಕಾರಕ್ಕೆ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ, ಶ್ರೀ ಹೆಚ್. ಎಸ್. ಮಹಾಬಲೇಶ್ವರಪ್ಪ, ಪಿ.ಐ. ರೈಲ್ವೆ ವಾಡಿ ರವರು ಸರ್ಕಾರಕ್ಕೆ ಸಲ್ಲಿಸಿರುವ ಪರಿಷ್ಕರಣ ಮೇಲ್ಮನವಿ ಅರ್ಜಿಯನ್ನು ತಿರಸ್ಕರಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್.1174

**ಆರ್. ರಂಗಮಣಿ**

ಸರ್ಕಾರದ ಅಧೀನ ಕಾರ್ಯದರ್ಶಿ, ಒಳಾಡಳಿತ ಇಲಾಖೆ (ಪೊಲೀಸ್ ಸೇವೆಗಳು).

## ENERGY SECRETARIAT

**Sub :** Incorporation of New Electricity Supply Company with head quarters at Mysore.

**Read :** Government Order No. EN 98 PSR 2004 dated 19th August 2004

**Preamble:**

In the Government Order read above, it was approved to establish a new electricity distribution company with Mysore as Head Quarters under the name "Chamundeshwari Electricity Supply Company Limited". Along with this name two other names, viz Mysore Electricity Supply Company Limited and Chamundi Electricity supply company limited were also approved for applying to Registrar of Companies for name availability. Further the initial authorized share capital of the New company was approved as Rs. 1.00 Crore.

KPTCL vide its letter No. KPTCL/MD/CS/B37 informed the Government that the Registrar of Companies approved the name for the new electricity Supply company as "Chamundeshwari Electricity Supply Corporation Limited" and further indicated that the authorized share capital is to be at Rs.5.00 Crores at the time of registering the company KPTCL requested the Government to issue an amended Government Order incorporating the above changes. Hence this Order.

**Government Order No. EN 98 PSR 2004 Bangalore dated: 18th October 2004**

In the circumstances explained in the preamble, Government are pleased to accord approval for the following:

To incorporate the New electricity Distribution Company with Head Quarters at Mysore, approved in the Government Order dated 19th August 2004, under the name of "Chamundeshwari Electricity Supply Corporation Limited" with an initial authorized share capital of Rs. 5 Crores.

By Order and in the name of the Governor of Karnataka,

PR-1179

**K. L. JAYARAM**

Under Secretary to Government, Energy Department.

**ವಾರ್ತಾ, ಪ್ರವಾಸೋದ್ಯಮ ಹಾಗೂ ಯುವಜನಸೇವಾ ಸಚಿವಾಲಯ**

**ವಿಷಯ:-** ವಾರ್ತಾ ಇಲಾಖೆಯ ವಿಭಾಗೀಯ ಕಛೇರಿಗಳು ಮತ್ತು ಅದಕ್ಕೆ ಹೊಂದಿಕೊಂಡಂತಹ ಹುದ್ದೆಗಳನ್ನು ಸರ್ಕಾರದ ನೀತಿಗನುಗುಣವಾಗಿ ರದ್ದುಗೊಳಿಸುವ ಬಗ್ಗೆ.

**ಓದಲಾಗಿದೆ:-**
1. ಸರ್ಕಾರದ ಆದೇಶಸಂಖ್ಯೆ: ಸಿಆಸುಇ 10 ಈಕಾಇ 2001, ದಿನಾಂಕ: 13-2-2004.
2. ಸರ್ಕಾರದ ಆದೇಶಸಂಖ್ಯೆ: ವಾಪ್ರಯು 34 ವಾಪ್ರಸಿ 2001, ದಿ: 28-2-2004.
3. ದಿನಾಂಕ: 26-3-2004 ಮತ್ತು 4-8-2004ರ ವಿಭಾಗೀಯ ಮಟ್ಟದ ಹುದ್ದೆಗಳ ರದ್ಧತಿಯ ಬಗ್ಗೆ ನಡೆದ ಸಭೆಯ ನಡವಳಿಗಳು.
4. ಸರ್ಕಾರದ ಆದೇಶಸಂಖ್ಯೆ: ಸಿಆಸುಇ 38 ಆರ್ ಡಿ ಸಿ 2004 ದಿನಾಂಕ:06-8-2004
5. ಆಯುಕ್ತರು, ವಾರ್ತಾ ಇಲಾಖೆ ಇವರ ಪತ್ರ ಸಂಖ್ಯೆ ವಾಇ:ಇಎಂಎಂ: ಇ8: 11: 2001-02: 7174 ದಿನಾಂಕ: 18-8-2004.

ಪ್ರಸ್ತಾವನೆ:

ಆಡಳಿತ ಸುಧಾರಣಾ ಆಯೋಗದ ಶಿಫಾರಸ್ಸಿನ ಹಿನ್ನಲೆಯಲ್ಲಿ ಉಲ್ಲೇಖ (1)ರ ಆದೇಶದಂತೆ ವಾರ್ತಾ ಇಲಾಖೆಯ ವಿಭಾಗೀಯ ಕಛೇರಿಗಳು ಮತ್ತು ಅದಕ್ಕೆ ಹೊಂದಿಕೊಂಡಂತಹ ಹುದ್ದೆಗಳನ್ನು ಉಲ್ಲೇಖ (2)ರ ಆದೇಶದಲ್ಲಿ ತಾತ್ವಿಕವಾಗಿ ರದ್ದುಗೊಳಿಸಿ ಇಲಾಖಾ ಮುಖ್ಯಸ್ಥರ ಹಂತದಲ್ಲಿ ನಡೆಸಬೇಕಾದ ಪ್ರಕ್ರಿಯೆಗಳನ್ನು ನಿಗದಿಪಡಿಸಿರುತ್ತದೆ. ವಾರ್ತಾ ಇಲಾಖೆಯ ವಿಭಾಗೀಯ ಹುದ್ದೆಗಳ ರದ್ದತಿಯ ಬಗ್ಗೆ ಸರ್ಕಾರದ ಹಂತದಲ್ಲಿ ವಾರ್ತಾ ಆಯುಕ್ತರ ಜೊತೆ ಸಮಾಲೋಚಿಸಿ, ವಿಭಾಗೀಯ ರದ್ಧತಿಯ ಹುದ್ದೆಗಳ ಬಗ್ಗೆ ಉಲ್ಲೇಖ (3) ರಲ್ಲಿನ ನಡವಳಿಯಂತೆ ಇಲಾಖೆಗಳು ಅನುಸರಿಸಬೇಕಾದ ಕ್ರಮದ ಬಗ್ಗೆ ಸಮಗ್ರವಾಗಿ ಚರ್ಚಿಸಿ ಕೆಲವೊಂದು ಆಡಳಿತಾತ್ಮಕ ನಿರ್ಣಯಗಳನ್ನು ವಾರ್ತಾ ಪ್ರವಾಸೋದ್ಯಮ ಹಾಗೂ ಯುವಜನ ಸೇವಾ ಸಚಿವಾಲಯದ ಹಂತದಲ್ಲಿ ತೆಗೆದುಕೊಳ್ಳಲಾಗಿರುತ್ತದೆ.

ಹೆಚ್ಚುವರಿಯೆಂದು ಗುರುತಿಸಲ್ಪಟ್ಟ ಅಧಿಕಾರಿ/ನೌಕರರ ಸೇವೆಯನ್ನು ಮುಂದಿನ ಸ್ಥಳ ನಿಯುಕ್ತಿಗಾಗಿ ಸಿಆಸುಇಲಾಖೆಯ ಮರು ನಿಯೋಜನೆ ಕೋಶಕ್ಕೆ ನೀಡಬೇಕೆಂದು ನಿರ್ಧರಿಸಿದ್ದನ್ನು ತರುವಾಯ ಉಲ್ಲೇಖ (4)ರ ಆದೇಶದಲ್ಲಿ ಮಾರ್ಪಾಡು ಮಾಡಿ ಹೆಚ್ಚುವರಿಯೆಂದು ಗುರುತಿಸಲಾದ ನೌಕರರು / ಅಧಿಕಾರಿಗಳ ಸೇವೆಯನ್ನು ಖಾಯಂ ಆಗಿ ಬೇರೆ ಇಲಾಖೆಯ ಹುದ್ದೆಗಳಿಗೆ ವರ್ಗಾಯಿಸುವವರೆಗೆ ಅವರುಗಳ ಲೀನ್ ಅನ್ನು ಇಲಾಖೆಯಲ್ಲಿಯೇ ಉಳಿಸಿಕೊಳ್ಳಲು ಆದೇಶಿಸಲಾಗಿರುತ್ತದೆ. ಹೆಚ್ಚುವರಿಯೆಂದು ಗುರ್ತಿಸಲ್ಪಟ್ಟ ಅಧಿಕಾರಿ/ ನೌಕರರಿಗೆ ಪ್ರಸ್ತುತ ಇಲಾಖೆಯಲ್ಲಿ ಖಾಲಿ ಇರುವ ಹುದ್ದೆಗಳಲ್ಲಿ ಸ್ಥಳಾವಕಾಶ ಮಾಡಿಕೊಟ್ಟು ಈ ಪ್ರಕ್ರಿಯೆಗಳ ನಂತರವೂ ಉಳಿಯಲ್ಪಡುವ ನೌಕರರು/ಅಧಿಕಾರಿಗಳನ್ನು ಬೇರೆ ಇಲಾಖೆಯ ಖಾಲಿ ಇರುವ ಸಮಾನಾಂತರ ಹುದ್ದೆಗಳಲ್ಲಿ ಖಾಯಂ ಆಗಿ ವಿಲೀನಗೊಳ್ಳುವವರೆಗೆ ಅವರ ಹುದ್ದೆಗಳ ಲೀನ್ ಅನ್ನು ಇಲಾಖೆಯಲ್ಲೇ ಉಳಿಸಿಕೊಂಡು ಅವರ ಸೇವೆಯನ್ನು ಇಲಾಖೆಯಲ್ಲೇ ಮುಂದುವರೆಸಬೇಕಾಗುತ್ತದೆ. ಅಂತೆಯೇ ಈ ವಾಸ್ತವಾಂಶಗಳ ಹಿನ್ನೆಲೆಯಲ್ಲಿ ಉಲ್ಲೇಖ (5)ರಲ್ಲಿ ಆಯುಕ್ತರು, ವಾರ್ತಾ ಇಲಾಖೆ, ಇವರು ಪರಿಷ್ಕೃತ ಪ್ರಸ್ತಾವನೆಯೊಂದನ್ನು ಸಲ್ಲಿಸಿರುತ್ತಾರೆ.

ವಿಭಾಗಿಯ ಕಛೇರಿಗಳ ರದ್ಧತಿಯಿಂದ ಹೊರಬೀಳಲಿರುವ ಅಧಿಕಾರಿ/ನೌಕರರುಗಳನ್ನು ಮೊದಲಿಗೆ ಇಲಾಖೆಯ ಖಾಲಿ ಹುದ್ದೆಗಳಲ್ಲಿ ಸ್ಥಳಾವಕಾಶ ಮಾಡಿಕೊಡಲಾಗಿದೆ. ತದನಂತರ ವಾರ್ತಾ, ಪ್ರವಾಸೋದ್ಯಮ ಮತ್ತು ಯುವಜನಸೇವಾ ಇಲಾಖೆಯ ವ್ಯಾಪ್ತಿಯಲ್ಲಿರುವ ಇತರೆ ಇಲಾಖೆಗಳಾದ ವಾರ್ತಾ, ಪ್ರವಾಸೋದ್ಯಮ ಮತ್ತು ಸರ್ಕಾರಿ ವೈಮಾನಿಕ ತರಬೇತಿ ಶಾಲೆಯ ಖಾಲಿ ಹುದ್ದೆಗಳಲ್ಲಿ ಸ್ಥಳಾವಕಾಶ ಮಾಡಿಕೊಡಲು ವಿವಿಧ ಇಲಾಖಾ ಮುಖ್ಯಸ್ಥರೊಂದಿಗೆ ಸಮಾಲೋಚಿಸಲಾಗಿ ಅವರುಗಳಿಂದ ತಿಳಿದು ಬಂದಂತೆ ಗ್ರೂಪ್ ಎ ವೃಂದದಲ್ಲಿ ಸಮಾನಾಂತರ ವೇತನ ಶ್ರೇಣಿಯ ಖಾಲಿ ಹುದ್ದೆಗಳು ಲಭ್ಯವಿರುವುದಿಲ್ಲ. ಆದಾಗ್ಯೂ ವಾರ್ತಾ ಇಲಾಖೆಯಲ್ಲಿ ಹೆಚ್ಚುವರಿಯೆಂದು ಗುರುತಿಸಲ್ಪಟ್ಟ ಗ್ರೂಪ್ ಸಿ ವೃಂದಕ್ಕೆ ಸೇರಿದ 7 ದ್ವಿತೀಯ ದರ್ಜೆ ಸಹಾಯಕರ ಸೇವೆಯನ್ನು ಸಿಆಸು ಇಲಾಖೆ (ಆಡಳಿತ) ಇಲ್ಲಿಗೂ ಇದೇ ರೀತಿಯಾಗಿ 2 ಶೀಘ್ರಲಿಪಿಗಾರರ ಹುದ್ದೆಗಳನ್ನು ಪ್ರವಾಸೋದ್ಯಮ ಇಲಾಖೆಗೆ ನಿಯೋಜಿಸಲು ಉದ್ದೇಶಿಸಲಾಗಿದೆ. ಇಲಾಖೆಯಲ್ಲಿ ಹೆಚ್ಚುವರಿಯೆಂದು ಗುರುತಿಸಲ್ಪಟ್ಟ ಮೇಲಿನ ನೌಕರರುಗಳನ್ನು ಖಾಯಂ ಆಗಿ ಬೇರೆ ಇಲಾಖೆಗಳ ಖಾಲಿ ಹುದ್ದೆಯಲ್ಲಿ ವಿಲೀನಗೊಳಿಸುವವರೆಗೆ, ಇವರುಗಳ ಸೇವೆಯನ್ನು ಇಲಾಖೆಯಲ್ಲೇ ಉಳಿಸಿಕೊಳ್ಳಲಾಗುವುದು. ಈ ಸಂದರ್ಭದಲ್ಲಿ ಮಾರ್ಗಸೂಚಿಗಳನುಸಾರ ಅಧಿಕಾರಿ/ನೌಕರರ ಸೇವಾ ಜೇಷ್ಠತೆಯನ್ನು ಅಳತೆಗೋಲಾಗಿ ಇಟ್ಟುಕೊಂಡು ಸೇವಾ ಜೇಷ್ಠತೆಯಲ್ಲಿ ಕಿರಿಯರಾದ ಅಧಿಕಾರಿ/ನೌಕರರನ್ನು ಮಾತ್ರ ಹೆಚ್ಚುವರಿಯೆಂದು ಗುರುತಿಸಲಾಗಿದೆ.

ವಾರ್ತಾ ಆಯುಕ್ತರ ಪ್ರಸ್ತಾವನೆಯನ್ನು ಸರ್ಕಾರವು ಕೂಲಂಕಷವಾಗಿ ಪರಿಶೀಲಿಸಿದೆ. ಆದ್ದರಿಂದ ಈ ಕೆಳಕಂಡ ಆದೇಶ.

**ಸರ್ಕಾರಿ ಆದೇಶ ಸಂಖ್ಯೆ ವಾಪ್ರಯು 34 ವಾಪ್ರಸಿ 2001, ಬೆಂಗಳೂರು, ದಿನಾಂಕ: 04ನೇ ಅಕ್ಟೋಬರ್ 2004**

ಮೇಲ್ಕಂಡ ಪ್ರಸ್ತಾವನೆಯಲ್ಲಿ ವಿವರಿಸಿರುವಂತೆ ವಿಭಾಗೀಯ ಕಛೇರಿಗಳ ರದ್ಧತಿಯ ನೀತಿ ನಿರ್ಧಾರದ ಹಿನ್ನಲೆಯಲ್ಲಿ ತಕ್ಷಣದಿಂದ ಜಾರಿಗೆ ಬರುವಂತೆ ವಾರ್ತಾ ಇಲಾಖೆಯ ಎಲ್ಲಾ ನಾಲ್ಕು ವಿಭಾಗೀಯ ಕಛೇರಿಗಳು ಅಂದರೆ ಬೆಂಗಳೂರು, ಮೈಸೂರು, ಗುಲ್ಬರ್ಗಾ, ಮತ್ತು ಬೆಳಗಾಂ ವಿಭಾಗೀಯ ಕಚೇರಿಗಳನ್ನು ರದ್ದುಗೊಳಿಸಲಾಗಿದೆ. ತತ್ಪರಿಣಾಮವಾಗಿ, ಈ ವಿಭಾಗೀಯ ಕಛೇರಿಗಳಲ್ಲಿ ಕಾರ್ಯನಿರ್ವಹಿಸುತ್ತಿದ್ದ ನೌಕರರ / ಅಧಿಕಾರಿಗಳ ಈ ಕೆಳಕಂಡ ಹುದ್ದೆಗಳು ತಕ್ಷಣದಿಂದ ರದ್ದಾಗಿರುತ್ತವೆ.

| ಕ್ರ.ಸಂ | ವೃಂದ | ಪದನಾಮ | ರದ್ದಾಗಲಿರುವ ಹುದ್ದೆಗಳ ಸಂಖ್ಯೆ | ಷರಾ |
|---|---|---|---|---|
| 1. | ಗ್ರೂಪ್-ಎ | ಉಪ ನಿರ್ದೇಶಕರು | 4 | |
| 2. | ಗ್ರೂಪ್ - ಸಿ | ತಾಂತ್ರಿಕ ಸಹಾಯಕರು | 4 | |

| ಕ್ರ.ಸಂ | ವೃಂದ | ಪದನಾಮ | ರದ್ದಾಗಲಿರುವ ಹುದ್ದೆಗಳ ಸಂಖ್ಯೆ | ಷರಾ |
|---|---|---|---|---|
| 3. | ಡಿಟೋ | ಆಡಿಯೋ ವಿಷ್ಯುಯಲ್ ಸೂಪರ್ ವೈಸರ್ | 3 | |
| 4. | ಡಿಟೋ | ಅಧೀಕ್ಷಕರು | 4 | |
| 5. | ಡಿಟೋ | ಪ್ರ.ದ.ಸ | 4 | |
| 6. | ಡಿಟೋ | ದ್ವಿ.ದ.ಸ. | 12 | |
| 7. | ಡಿಟೋ | ಶೀಘ್ರಲಿಪಿಗಾರರು | 4 | |
| 8. | ಡಿಟೋ | ವಾಹನ ಚಾಲಕರು | 8 | |
| 9. | ಡಿಟೋ | ಬೆರಳಚ್ಚುಗಾರರು | 2 | |
| 10. | ಡಿಟೋ | ಛಾಯಾಗ್ರಾಹಕ | 3 | |
| 11. | ಡಿಟೋ | ಯಾಂತ್ರಿಕ ಸಹಾಯಕ | 2 | |
| 10. | ಗ್ರೂಪ್ – ಡಿ | ಅಟೆಂಡರ್ | 4 | |
| 11. | ಡಿಟೋ | ಸೇವಕ | 8 | |
| 12. | ಡಿಟೋ | ವಾಹನ ಚೊಕಟ್ಟಗಾರ | 6 | |
| | ಒಟ್ಟು | | 68 | |

ಮೇಲ್ಕಂಡ ಹುದ್ದೆಗಳ ಪೈಕಿ ನಿಯೋಜನೆ ಮೇಲೆ ತೆರಳಲಿರುವ 7 ದ್ವಿತೀಯ ದರ್ಜೆ ಸಹಾಯಕರು ಹಾಗೂ 2 ಶೀಘ್ರಲಿಪಿಗಾರರ ಹುದ್ದೆಯ ರದ್ಧತಿಯು , ಸದರಿ ಹುದ್ದೆಯಲ್ಲಿ ಕಾರ್ಯನಿರ್ವಹಿಸುತ್ತಿರುವ ನೌಕರರುಗಳು ಬೇರೆ ಇಲಾಖೆಗಳಲ್ಲಿ ಖಾಯಂ ವಿಲೀನಾತಿ ನಂತರ ಸ್ವಯಂ ಚಾಲಿತವಾಗಿ ರದ್ದಾಗುತ್ತದೆ. ಅಲ್ಲಿಯವರೆಗೆ ಸದರಿ ನೌಕರರ ವೇತನ ಪಾವತಿ ಹಾಗೂ ಇಲಾಖೆಯಲ್ಲಿನ ಅವರ ಸೇವಾ ಜೇಷ್ಠತೆ ರಕ್ಷಣೆಯ ಸೀಮಿತ ಉದ್ದೇಶಕ್ಕೊಳಪಟ್ಟು ಸದರಿ ಹುದ್ದೆಗಳ ಲೀನ್‌ನ್ನು ವಿಶೇಷ ಪ್ರಕರಣವೆಂದು ಪರಿಗಣಿಸಿ ಕೇಂದ್ರ ಕಛೇರಿಯಲ್ಲಿಯೇ ಉಳಿಸಿಕೊಳ್ಳಲು ಅನುಮತಿಸಲಾಗಿದೆ. ಆದಾಗ್ಯೂ ತದನಂತರದ ದಿನಗಳಲ್ಲಿ ನಿವೃತ್ತಿ/ ಬಡ್ತಿಯಿಂದ ತೆರವಾಗಲಿರುವ ದ್ವಿತೀಯ ದರ್ಜೆ ಸಹಾಯಕ, ಶೀಘ್ರಲಿಪಿಗಾರರ ಹುದ್ದೆಗಳನ್ನು ಭರ್ತಿ ಮಾಡುವ ಸಂದರ್ಭದಲ್ಲಿ ನಿಯೋಜನೆ ಮೇಲೆ ತೆರಳಿರುವ ನೌಕರರುಗಳ ಸೇವೆಯನ್ನು ವಾಪಸ್ಸು ತೆಗೆದುಕೊಂಡು ಈ ಖಾಲಿ ಹುದ್ದೆಗಳಿಗೆ ಸ್ಥಳ ನಿಯುಕ್ತಿಸಬಹುದಾಗಿದೆ. ಯಾವುದೇ ಸಂದರ್ಭದಲ್ಲಿ ನಿವೃತ್ತಿ/ಬಡ್ತಿಯಿಂದ ತೆರವಾಗುವ ಹುದ್ದೆಗಳನ್ನು ಹೆಚ್ಚುವರಿಯೆಂದು ಗುರುತಿಸಲಾದ ನೌಕರರುಗಳನ್ನು ಬೇರೆ ಇಲಾಖೆಯ ಖಾಲಿ ಹುದ್ದೆಗಳಲ್ಲಿ ಖಾಯಂ ಆಗಿ ವಿಲೀನಾತಿ ಮಾಡುವುದು ಅಥವಾ ಆಂತರಿಕವಾಗಿ ಪೂರ್ಣವಾಗಿ ಮರು ಹೊಂದಾಣಿಕೆ ಮಾಡುವವರೆಗೆ ಬಡ್ತಿಗಾಗಿ ಹುದ್ದೆಗಳನ್ನು ಬಳಸಿಕೊಳ್ಳುವಂತಿಲ್ಲ.

ವಿಭಾಗೀಯ ಕಛೇರಿಗಳ ರದ್ಧತಿಯ ಹಿನ್ನೆಲೆಯಲ್ಲಿ ಒಟ್ಟಾರೆ 68 ಹುದ್ದೆಗಳನ್ನು ರದ್ದುಗೊಳಿಸಲಾಗಿದ್ದು, ಅಂತೆಯೇ ವೃಂದಬಲವನ್ನು ಸೂಕ್ತವಾಗಿ ಪರಿಷ್ಕರಿಸಲು ಅನುವಾಗುವಂತೆ ಪ್ರಸ್ತಾವನೆಯನ್ನು ವೃಂದ ಪರಿಶೀಲನಾ ಸಮಿತಿಯ ಮುಂದೆ ಮಂಡಿಸುವುದು.

ಹೆಚ್ಚುವರಿಯೆಂದು ಗುರುತಿಸಲ್ಪಟ್ಟ ನೌಕರರು : ಅಧಿಕಾರಿಗಳು ಕೂಡಲೇ ವಾರ್ತಾ ಆಯುಕ್ತರಿಗೆ ವರದಿ ಸಲ್ಲಿಸಿ ಕೇಂದ್ರ ಕಛೇರಿಯ ನಿರ್ದೇಶನಕ್ಕಾಗಿ ನಿರೀಕ್ಷಿಸಬಹುದು.

ವಿಭಾಗೀಯ ಕಛೇರಿಗಳ ರದ್ಧತಿಯ ಪ್ರಕ್ರಿಯೆಯಿಂದಾಗಿ ಉದ್ಭವಿಸಬಹುದಾದ ಆರ್ಥಿಕ / ಆಡಳಿತಾತ್ಮಕ ಪ್ರತ್ಯಾಯೋಜನೆಯ ಅಧಿಕಾರವನ್ನು ವಾರ್ತಾ ಆಯುಕ್ತರೇ ಹೊಂದಿರುತ್ತಾರೆ. ಅಂತೆಯೇ ರದ್ದಾಗುವ ವಿಭಾಗೀಯ ಕಛೇರಿಗಳಲ್ಲಿನ ನ್ಯಾಯಾಂಗ ವಿಚಾರಣೆ:ಸೇವಾ ವಿಷಯಗಳಿಗೆ ಸಂಬಂಧಿಸಿದಂತೆ ತೀರ್ಮಾನವನ್ನು ಮತ್ತು ವಾಹನ/ ಪೀಠೋಪಕರಣ ಇತರೆ ಪರಿಕರಗಳನ್ನು ಬೇರೆಡೆ ಮರುಹೊಂದಾಣಿಕೆ ಮಾಡುವ ಅಧಿಕಾರವನ್ನು ವಾರ್ತಾ ಆಯುಕ್ತರಿಗೆ ವಹಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎಸ್. ಸೀತಮ್ಮ**

ಪಿ.ಆರ್. 1116

ಸರ್ಕಾರದ ಅಧೀನ ಕಾರ್ಯದರ್ಶಿ,

ವಾರ್ತಾ, ಪ್ರವಾಸೋದ್ಯಮ ಹಾಗೂ ಯುವಜನಸೇವಾ ಇಲಾಖೆ.

**ಗ್ರಾಮೀಣಾಭಿವೃದ್ಧಿ ಮತ್ತು ಪಂ.ರಾಜ್ ಸಚಿವಾಲಯ**

**ವಿಷಯ**:- ಕೋಲಾರ ಜಿಲ್ಲೆ, ಮಾಲೂರು ತಾಲ್ಲೂಕಿನಲ್ಲಿ 88-89ನೇ ಮತ್ತು 90-91ನೇ ಸಾಲಿನ ಕಪ್ಪು ಹಲಗೆ ಯೋಜನೆಯಡಿ ಕೈಗೊಂಡ ಶಾಲಾ ಕಟ್ಟಡ ನಿರ್ಮಾಣದಲ್ಲಿನ ಅವ್ಯವಹಾರ- ಶ್ರೀ ಎಸ್.ಹನುಮಂತರಾಜು, ಅಂದಿನ ಸಹಾಯಕ ಕಾರ್ಯಪಾಲಕ ಇಂಜಿನಿಯರ್ ಮತ್ತು ಶ್ರೀ ವಿ.ಬಾಬಣ್ಣ, ಅಂದಿನ ಕಿರಿಯ ಇಂಜಿನಿಯರ್, ಜಿಲ್ಲಾ ಪಂಚಾಯತ್ ಇಂಜಿನಿಯರಿಂಗ್ ಉಪವಿಭಾಗ, ಮಾಲೂರು ಇವರುಗಳ ಮೇಲೆ ಇಲಾಖಾ ವಿಚಾರಣೆ - ದಂಡನೆ ವಿಧಿಸುವ ಬಗ್ಗೆ-ಆದೇಶ.

**ಓದಲಾಗಿದೆ**:-
1. ಮುಖ್ಯ ಕಾರ್ಯನಿರ್ವಾಹಕ ಅಧಿಕಾರಿ, ಜಿಲ್ಲಾ ಪಂಚಾಯತ್, ಕೋಲಾರ ಇವರ ಪತ್ರ ಸಂ:ಜಿಪಂಅ/ ಜೆಆರ್ ವೈ ಒಬಿಬಿ(ಮಾಲೂರು)/1/91-92 ದಿ.16-8-91.
2. ಶ್ರೀ ಎಸ್.ಹನುಮಂತರಾಜು, ಅಂದಿನ ಸಹಾಯಕ ಕಾರ್ಯಪಾಲಕ ಇಂಜಿನಿಯರ್ ಮತ್ತು ಶ್ರೀ ವಿ.ಬಾಬಣ್ಣ, ಅಂದಿನ ಕಿರಿಯ ಇಂಜಿನಿಯರ್ ಇವರಿಗೆ ಆರೋಪಪಟ್ಟಿಯೊಂದಿಗೆ ಜಾರಿಗೊಳಿಸಿದ ಕಾರಣ ಕೇಳುವ ನೋಟಿಸ್ ಸಂ:ಗ್ರಾಅಪ 146 ಇಎಸ್‌ಕ್ಯೂ 9 ದಿ.16-7-92.

3. ಶ್ರೀ ಎಸ್.ಹನುಮಂತರಾಜು, ಅಂದಿನ ಸಹಾಯಕ ಕಾರ್ಯಪಾಲಕ ಇಂಜಿನಿಯರ್ ಇವರ ದಿ.30-12-92ರ ಲಿಖಿತ ಹೇಳಿಕೆ .
4. ಆದೇಶ ಸಂ:ಗ್ರಾಅಪ 146 ಇ ಎನ್ ಕ್ಯೂ 91 ದಿ.31-12-96.
5. ವಿಚಾರಣಾಧಿಕಾರಿಗಳ ದಿ.2-8-02ರ ಮತ್ತು 18-7-03ರ ವರದಿ.
6. 2ನೇ ಕಾರಣ ಕೇಳುವ ನೋಟಿಸ್ ಸಂ:ಗ್ರಾಅಪ 146 ಇ ಎನ್ ಕ್ಯೂ 91 ದಿ.3-2-04.
7. ಶ್ರೀ ಎಸ್.ಹನುಮಂತರಾಜು, ಅಂದಿನ ಸಹಾಯಕ ಕಾರ್ಯಪಾಲಕ ಇಂಜಿನಿಯರ್ ಇವರ ದಿ.3-6-04 ಮತ್ತು ಶ್ರೀ ವಿ.ಬಾಬಣ್ಣ, ಅಂದಿನ ಕಿರಿಯ ಇಂಜಿನಿಯರ್ ಇವರ ದಿ.20-2-04. ಲಿಖಿತ ಹೇಳಿಕೆಗಳು.
8. ಕಾರ್ಯದರ್ಶಿ, ಕರ್ನಾಟಕ ಲೋಕಸೇವಾ ಆಯೋಗ ಇವರ ಪತ್ರ ಸಂ:ಪಿಎಸ್ ಸಿ 52 ಸಿ ಎನ್ ಎಸ್ 04 ದಿ.24-8-04.

ಪ್ರಸ್ತಾವನೆ:

ಮುಖ್ಯ ಕಾರ್ಯನಿರ್ವಾಹಕ ಅಧಿಕಾರಿ, ಜಿಲ್ಲಾ ಪಂಚಾಯತ್, ಕೋಲಾರ ಇವರು ಮೇಲೆ ಓದಲಾದ ಕ್ರಮ ಸಂಖ್ಯೆ(1)ರ ಪತ್ರದಲ್ಲಿ ಶ್ರೀ ಎಸ್.ಹನುಮಂತರಾಜು, ಅಂದಿನ ಸಹಾಯಕ ಕಾರ್ಯಪಾಲಕ ಇಂಜಿನಿಯರ್ ಮತ್ತು ಶ್ರೀ ವಿ.ಬಾಬಣ್ಣ, ಅಂದಿನ ಕಿರಿಯ ಇಂಜಿನಿಯರ್, ಜಿಲ್ಲಾ ಪಂಚಾಯತ್ ಇಂಜಿನಿಯರಿಂಗ್ ಉಪವಿಭಾಗ, ಮಾಲೂರು ಇವರುಗಳು ಕೋಲಾರ ಜಿಲ್ಲೆ, ಮಾಲೂರು ತಾಲ್ಲೂಕಿನಲ್ಲಿ 88-89ನೇ ಮತ್ತು 90-91ನೇ ಸಾಲಿನ ಕಪ್ಪು ಹಲಗೆ ಯೋಜನೆಯಡಿ ಕೈಗೊಂಡ ಶಾಲಾ ಕಟ್ಟಡ ನಿರ್ಮಾಣದಲ್ಲಿ ಎಸಗಿರುವರೆನ್ನಲಾದ ಅವ್ಯವಹಾರಕ್ಕೆ ಸಂಬಂದಿಸಿದಂತೆ ಇವರುಗಳ ವಿರುದ್ದ ಶಿಸ್ತು ಕ್ರಮ ಜರುಗಿಸಲು ಪ್ರಸ್ತಾವನೆಯನ್ನು ಕರಡು ಆರೋಪಪಟ್ಟಿಯೊಂದಿಗೆ ಸರ್ಕಾರಕ್ಕೆ ಸಲ್ಲಿಸಿದ್ದರು.

ಸರ್ಕಾರವು ಪ್ರಸ್ತಾವನೆಯನ್ನು ಪರಿಶೀಲಿಸಿ ಶ್ರೀ ಎಸ್.ಹನುಮಂತರಾಜು, ಅಂದಿನ ಸಹಾಯಕ ಕಾರ್ಯಪಾಲಕ ಇಂಜಿನಿಯರ್ ಮತ್ತು ಶ್ರೀ ವಿ.ಬಾಬಣ್ಣ, ಅಂದಿನ ಕಿರಿಯ ಇಂಜಿನಿಯರ್ ಇವರುಗಳ ಮೇಲೆ ಕರ್ನಾಟಕ ಸರ್ಕಾರಿ ಸೇವಾ (ವನಿಮೇ) ನಿಯಮಗಳ 1957ರ ನಿಯಮ 11ರನ್ವಯ ಇಲಾಖಾ ವಿಚಾರಣೆ ಹೂಡಲು ನಿರ್ಧರಿಸಿ, ಮೇಲೆ ಓದಲಾದ ಕ್ರಮ ಸಂಖ್ಯೆ (2)ರ ಕಾರಣ ಕೇಳುವ ನೋಟಿಸ್‌ನೊಂದಿಗೆ ಆರೋಪಪಟ್ಟಿ ಜಾರಿಗೊಳಿಸಿತ್ತು. ಸರ್ಕಾರದಿಂದ ಜಾರಿಗೊಳಿಸಿದ್ದ ಕಾರಣ ಕೇಳುವ ನೋಟಿಸ್‌ಗೆ ಮೇಲೆ ಓದಲಾದ ಕ್ರಮ ಸಂಖ್ಯೆ (3)ರಂತೆ ಶ್ರೀ ಎಸ್.ಹನುಮಂತರಾಜು ಇವರು ಲಿಖಿತ ಹೇಳಿಕೆಗಳನ್ನು ಸಲ್ಲಿಸಿ ತಮ್ಮ ಮೇಲಿನ ಆರೋಪಗಳನ್ನು ನಿರಾಕರಿಸಿದ್ದರು. ಆದರೆ, ಶ್ರೀ ವಿ.ಬಾಬಣ್ಣ ಇವರು ಲಿಖಿತ ಹೇಳಿಕೆ ಸಲ್ಲಿಸಿರಲಿಲ್ಲ. ಶ್ರೀ ಎಸ್.ಹನುಮಂತರಾಜು, ಅಂದಿನ ಸಹಾಯಕ ಕಾರ್ಯಪಾಲಕ ಇಂಜಿನಿಯರ್ ಇವರ ಲಿಖಿತ ಹೇಳಿಕೆಗಳನ್ನು ಸರ್ಕಾರವು ಪರಿಶೀಲಿಸಿ, ಅವುಗಳು ಸಮರ್ಪಕವಾಗಿಲ್ಲವೆಂದು ಮತ್ತು ಆಪಾದಿತ ನೌಕರರು ಆರೋಪಿತ ದುರ್ನಡತೆಯನ್ನು ಎಸಗಿದ್ದಾರೆಂದು ದಾಖಲೆಗಳಿಂದ ಮೇಲ್ನೋಟಕ್ಕೆ ಕಂಡುಬಂದಿದುದರಿಂದ ಆಪಾದಿತರ ಮೇಲಿನ ಆರೋಪಗಳ ಬಗ್ಗೆ ಸತ್ಯಾಂಶವನ್ನು ಅರಿಯಲು ಪ್ರಕರಣದಲ್ಲಿ ವಿವರವಾದ ಇಲಾಖಾ ವಿಚಾರಣೆ ನಡೆಸಲು ನಿರ್ಧರಿಸಿ, ಮೇಲೆ ಓದಲಾದ ಕ್ರಮ ಸಂಖ್ಯೆ (4)ರ ಆದೇಶದಲ್ಲಿ ಮುಖ್ಯ ಕಾರ್ಯನಿರ್ವಾಹಕ ಅಧಿಕಾರಿ, ಜಿಲ್ಲಾ ಪಂಚಾಯತ್, ಕೋಲಾರ ಇವರನ್ನು ವಿಚಾರಣಾಧಿಕಾರಿಗಳನ್ನಾಗಿ ಹಾಗೂ ಉಪಕಾರ್ಯದರ್ಶಿ (ಆಡಳಿತ), ಜಿಲ್ಲಾ ಪಂಚಾಯತ್, ಕೋಲಾರ ಇವರನ್ನು ಮಂಡನಾಧಿಕಾರಿಯನ್ನಾಗಿ ನೇಮಿಸಿತ್ತು. ಅದರಂತೆ ವಿಚಾರಣಾಧಿಕಾರಿಗಳು ಪ್ರಕರಣದಲ್ಲಿ ವಿಚಾರಣೆ ನಡೆಸಿ ಮೇಲೆ ಓದಲಾದ ಕ್ರಮ ಸಂಖ್ಯೆ (5)ರಂತೆ ವಿಚಾರಣಾ ವರದಿಯನ್ನು ಸರ್ಕಾರಕ್ಕೆ ಸಲ್ಲಿಸಿದ್ದರು.

ವಿಚಾರಣಾಧಿಕಾರಿಗಳು ತಮ್ಮ ವಿಚಾರಣಾ ವರದಿಯಲ್ಲಿ ಆರೋಪಿ ಅಧಿಕಾರಿ/ನೌಕರರ ವಿರುದ್ಧದ ಆರೋಪವು ಸಾಬೀತಾಗಿಲ್ಲವೆಂದು ವರದಿ ಮಾಡಿದ್ದರು.

ಆರೋಪಿತ ಅಧಿಕಾರಿ/ನೌಕರರ ವಿರುದ್ದದ ಆರೋಪದ ಸಾರಾಂಶವು ಈ ಕೆಳಗಿನಂತಿರುತ್ತದೆ.

1. ಮಿನಿಸಂದ್ರ ಗ್ರಾಮ ಶಾಲಾಕಟ್ಟಡ ಕಾಮಗಾರಿಯಲ್ಲಿ 7395-73ರೂ.ಗಳ ಹಣ ದುರುಪಯೋಗ
2. ಚಿನ್ನಾಪುರ ಗ್ರಾಮ ಶಾಲಾಕಟ್ಟಡ ಕಾಮಗಾರಿಯಲ್ಲಿ 3450-99 ರೂ.ಗಳ ಹಣ ದುರುಪಯೋಗ
3. ಚೌಡೇನಹಳ್ಳಿ ಗ್ರಾಮ ಶಾಲಾಕಟ್ಟಡ ಕಾಮಗಾರಿಯಲ್ಲಿ 6340-99ರೂ.ಗಳ ಹಣದುರುಪಯೋಗ
4. ಕೋಡಿಹಳ್ಳಿ ಗ್ರಾಮ ಶಾಲಾಕಟ್ಟಡ ಕಾಮಗಾರಿಯಲ್ಲಿ 6292-90ರೂ.ಗಳ ಹಣ ದುರುಪಯೋಗ
5. ಸೊಣ್ಣೂರು ಗ್ರಾಮ ಶಾಲಾಕಟ್ಟಡ ಕಾಮಗಾರಿಯಲ್ಲಿ 4119-82ರೂ.ಗಳ ಹಣ ದುರುಪಯೋಗ
6. ರಾಜಾಕೃಷ್ಣಾಪುರ ಗ್ರಾಮ ಶಾಲಾಕಟ್ಟಡ ಕಾಮಗಾರಿಯಲ್ಲಿ 2754-07ರೂ.ಗಳ ಹಣ ದುರುಪಯೋಗ
7. ಅಳಂಬಾಡಿ ಗ್ರಾಮ ಶಾಲಾಕಟ್ಟಡ ಕಾಮಗಾರಿಯಲ್ಲಿ 2611-02 ರೂ.ಗಳ ಹಣ ದುರುಪಯೋಗ
8. ಕಲ್ಕೆರೆ ಗ್ರಾಮ ಶಾಲಾಕಟ್ಟಡ ಕಾಮಗಾರಿಯಲ್ಲಿ 2861-85 ರೂ.ಗಳ ಹಣ ದುರುಪಯೋಗ
9. ಅಂಚೆಮುಸ್ಕೂರ್ ಗ್ರಾಮ ಶಾಲಾಕಟ್ಟಡ ಕಾಮಗಾರಿಯಲ್ಲಿ 2661-92 ರೂ.ಗಳ ಹಣ ದುರುಪಯೋಗ

ನಿಯಮ 11-ಎ ರಂತೆ ವಿಚಾರಣಾ ವರದಿಯನ್ನು ಲಭ್ಯವಿರುವ ದಾಖಲೆಗಳ ಆಧಾರದ ಮೇಲೆ ಶಿಸ್ತು ಪ್ರಾಧಿಕಾರವಾದ ಸರ್ಕಾರವು ಪರಿಶೀಲಿಸಿ ವಿಚಾರಣಾ ವರದಿಯನ್ನು ಒಪ್ಪದಿರಲು ನಿರ್ಧರಿಸಿ, ತನ್ನದೆ ಆದ ನಿರ್ಣಯಗಳನ್ನು ದಾಖಲಿಸಿ ಅದರಂತೆ ಆಪಾದಿತರ ಮೇಲಿನ ಆರೋಪಗಳು ರುಜುವಾತಾಗುತ್ತವೆಂದು ನಿರ್ಣಯಿಸಿ ಆಪಾದಿತ ನಿವೃತ್ತ ಅಧಿಕಾರಿಗಳಿಬ್ಬರಿಗೂ ಸದರಿ ನಿರ್ಣಯದೊಂದಿಗೆ ಸರ್ಕಾರವು ಮೇಲೆ ಓದಲಾದ ಕ್ರಮ ಸಂಖ್ಯೆ (6)ರಲ್ಲಿ ವಿಚಾರಣಾ ವರದಿಯೊಂದಿಗೆ 2ನೇ ಕಾರಣ ಕೇಳುವ ನೋಟಿಸ್‌ನ್ನು ಜಾರಿ ಮಾಡಿತ್ತು. 2ನೇ ಕಾರಣ ಕೇಳುವ ನೋಟಿಸ್‌ಗೆ ಆಪಾದಿತರು ಮೇಲೆ ಓದಲಾದ ಕ್ರಮ ಸಂಖ್ಯೆ (7)ರಂತೆ ತಮ್ಮ ಲಿಖಿತ ಹೇಳಿಕೆಗಳನ್ನು ಸಲ್ಲಿಸಿದ್ದರು. ಶ್ರೀ ಎಸ್.ಹನುಮಂತರಾಜು, ಅಂದಿನ ಸಹಾಯಕ ಕಾರ್ಯಪಾಲಕ ಇಂಜಿನಿಯರ್ ಇವರು

ಆರೋಪಗಳನ್ನು ನಿರಾಕರಿಸಿ ತಮ್ಮನ್ನು ಆರೋಪಗಳಿಂದ ದೋಷಾಮುಕ್ತಗೊಳಿಸುವಂತೆ ಕೋರಿದ್ದರು. ಹಾಗೂ ಶ್ರೀ ವಿ.ಬಾಬಣ್ಣ ಇ ವರು ಆರೋಪದಲ್ಲಿ ಒಳಗೊಂಡ ಮೊತ್ತ ರೂ.38,568-00ಗಳನ್ನು ತಮ್ಮ ನಿವೃತ್ತಿ ಸೌಲಭ್ಯದಲ್ಲಿ ಕಟಾಯಿಸಿಕೊಳ್ಳುವಂತೆ ಕೋರಿದ್ದರು. ಶ್ರೀ ಎಸ್.ಹನುಮಂತರಾಜು, ಅಂದಿನ ಸಹಾಯಕ ಕಾರ್ಯಪಾಲಕ ಇ ಂಜಿನಿಯರ್ ಇ ವರು 2ನೇ ಕಾರಣ ಕೇಳುವ ನೋಟಿಸ್‌ಗೆ ನೀಡಿರುವ ಲಿಖಿತ ಹೇಳಿಕೆಗಳನ್ನು ಪರಿಶೀಲಿಸಿದಾಗ ಅವುಗಳನ್ನು ಒಪ್ಪಲು ಯಾವುದೇ ಸಕಾರಣಗಳು ಹಾಗೂ ದಾಖಲಾತಿಗಳಿದ್ದು, ಅವರು ನೀಡಿರುವುದಿಲ್ಲವಾದ್ದರಿಂದ ಅವರು ಆಪಾದನೆಯಲ್ಲಿ ಒಳಗೊಂಡ ಹಣವನ್ನು ತಾತ್ಕಾಲಿಕ ದುರುಪಯೋಗ ಪಡಿಸಿಕೊಂಡಿದ್ದರಾದ್ದರಿಂದ ಅವರ ಮೇಲಿನ ಆರೋಪ ರುಜುವಾತಾಗುತ್ತವೆಂದು ಶಿಸ್ತು ಪ್ರಾಧಿಕಾರವಾದ ಸರ್ಕಾರವು ನಿರ್ಣಯಿಸಿ, ಸಾಬೀತಾದ ಆರೋಪಗಳಿಗನುಗುಣವಾಗಿ ದಂಡನೆ ವಿಧಿಸಲು ಮತ್ತು ಶ್ರೀ ವಿ.ಬಾಬಣ್ಣ ಇ ವರ ದಿ.20-2-04ರ ಮನವಿಯಲ್ಲಿ ಪ್ರಕರಣದಲ್ಲಿ ಉಂಟಾಗಿರುವ ಆರ್ಥಿಕ ನಷ್ಟದ ಮೊತ್ತ ರೂ.38,561-00ಗಳನ್ನು ಅವರ ಡಿ.ಸಿ.ಆರ್.ಜಿ.ಯಿಂದ ಕಟಾಯಿಸಲು ಸಮ್ಮತಿಸಿರುವುದರಿಂದ ಅದರಂತೆ ಇ ವರುಗಳಿಗೆ ಸೂಕ್ತ ದಂಡನೆ ವಿಧಿಸುವ ಬಗ್ಗೆ ಕರ್ನಾಟಕ ಲೋಕಸೇವಾ ಆಯೋಗದ ಸಹಮತಿ ಕೋರಲಾಗಿತ್ತು. ಕರ್ನಾಟಕ ಲೋಕಸೇವಾ ಆಯೋಗವು ಮೇಲೆ ಓದಲಾದ ಕ್ರಮ ಸಂಖ್ಯೆ (7)ರಲ್ಲಿ ಸರ್ಕಾರದ ಪ್ರಸ್ತಾವನೆಗೆ ತನ್ನ ಸಹಮತಿ ನೀಡಿದೆ. ಆದ್ದರಿಂದ ಈ ಆದೇಶ.

**ಆದೇಶ ಸಂಖ್ಯೆ :ಗ್ರಾಅಪ 146 ಇ ಎನ್ ಕ್ಯೂ 91 ಬೆಂಗಳೂರು, ದಿನಾಂಕ 30ನೇ ಸೆಪ್ಟೆಂಬರ್ 04**

ಪ್ರಸ್ತಾವನೆಯಲ್ಲಿ ವಿವರಿಸಲಾದ ಅಂಶಗಳ ಹಿನ್ನೆಲೆಯಲ್ಲಿ ಶ್ರೀ ಎಸ್.ಹನುಮಂತರಾಜು, ಅಂದಿನ ಸಹಾಯಕ ಕಾರ್ಯಪಾಲಕ ಇ ಂಜಿನಿಯರ್ ಮತ್ತು ಶ್ರೀ ವಿ.ಬಾಬಣ್ಣ, ಅಂದಿನ ಕಿರಿಯ ಇ ಂಜಿನಿಯರ್, ಜಿಲ್ಲಾ ಪಂಚಾಯತ್ ಇ ಂಜಿನಿಯರಿಂಗ್ ಉಪವಿಭಾಗ, ಮಾಲೂರು ಇ ವರುಗಳು ಕೋಲಾರ ಜಿಲ್ಲೆ, ಮಾಲೂರು ತಾಲ್ಲೂಕಿನ 88-89ನೇ ಮತ್ತು 90-91ನೇ ಸಾಲಿನ ಕಪ್ಪು ಹಲಗೆ ಯೋಜನೆಯಡಿ ಕೈಗೊಂಡ ಶಾಲಾ ಕಟ್ಟಡ ನಿರ್ಮಾಣದಲ್ಲಿ ಸರ್ಕಾರಕ್ಕೆ ಆರ್ಥಿಕ ನಷ್ಟವುಂಟು ಮಾಡಿರುವರೆಂಬ ಸಾಬೀತಾದ ಆರೋಪಗಳಿಗೆ ಮತ್ತು ಕರ್ತವ್ಯಲೋಪಕ್ಕೆ ಈ ಕೆಳಕಂಡಂತೆ ದಂಡನೆ ವಿಧಿಸಿ, ಸರ್ಕಾರವು ಆದೇಶಿಸಿದೆ.

1. ಶ್ರೀ ಎಸ್.ಹನುಮಂತರಾಜು, ಅಂದಿನ ಸಹಾಯಕ ಕಾರ್ಯಪಾಲಕ ಇ ಂಜಿನಿಯರ್(ನಿವೃತ್ತ) ಇ ವರು ರೂ. 38,561-00 ಗಳನ್ನು ತಾತ್ಕಾಲಿಕವಾಗಿ ದುರುಪಯೋಗಪಡಿಸಿಕೊಂಡಿರುವುದರಿಂದ ಆ ಮೊತ್ತದ ಶೇಕಡ 25ರಷ್ಟನ್ನು ಕರ್ನಾಟಕ ಸರ್ಕಾರಿ ಸೇವಾ ನಿಯಮ 214ರಂತೆ ವಸೂಲ್ಮಾಡುವುದು. ಹಾಗೂ ರೂ.38,561-00 ಯಾವ ದಿನಾಂಕದಿಂದ ದುರುಪಯೋಗ ವಾಗಿದೆಯೋ ಅಂದಿನಿಂದ ಮೊತ್ತ ವಸೂಲಿಯಾಗುವವರೆಗಿನ ಅವಧಿಗೆ ಶೇಕಡ 12ರಂತೆ ಬಡ್ಡಿಯನ್ನು ಕರ್ನಾಟಕ ಸರ್ಕಾರಿ ಸೇವಾ ನಿಯಮ 214ರಂತೆ ವಸೂಲು ಮಾಡುವುದು.
2. ಶ್ರೀ ವಿ.ಬಾಬಣ್ಣ, ಅಂದಿನ ಕಿರಿಯ ಇ ಂಜಿನಿಯರ್(ನಿವೃತ್ತ) ಇ ವರ ನಿವೃತ್ತಿ ವೇತನ ಸೌಲಭ್ಯಗಳಿಂದ ರೂ. 38,561-00 ಗಳನ್ನು ಕರ್ನಾಟಕ ಸರ್ಕಾರಿ ಸೇವಾ ನಿಯಮ 214ರನ್ವಯ ಅವರ ಡಿ.ಸಿ.ಆರ್.ಜಿಯಿಂದ ವಸೂಲು ಮಾಡುವುದು.

ಮುಖ್ಯ ಕಾರ್ಯನಿರ್ವಾಹಕ ಅಧಿಕಾರಿಗಳು, ಜಿಲ್ಲಾ ಪಂಚಾಯತ್, ಕೋಲಾರ ಇ ವರು ಸದರಿ ದಂಡನಾ ಆದೇಶವನ್ನು ಜಾರಿಗೊಳಿಸಲು ಸೂಕ್ತ ಕ್ರಮ ಜರುಗಿಸುವುದು.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎ.ಹೊನ್ನಪ್ಪ ನಾಯಕ್**

ಪಿ.ಆರ್. 1117

ಸರ್ಕಾರದ ಅಧೀನ ಕಾರ್ಯದರ್ಶಿ(ಸೇವೆಗಳು-ಎ),

ಗ್ರಾಮೀಣಾಭಿವೃದ್ಧಿ ಮತ್ತು ಪಂ.ರಾಜ್ ಇ ಲಾಖೆ.

## ಸಿಬ್ಬಂದಿ ಮತ್ತು ಆಡಳಿತ ಸುಧಾರಣಾ ಸಚಿವಾಲಯ

**ವಿಷಯ:** ಶ್ರೀ ಬಿ.ಟಿ.ಪೆಮ್ಮಯ್ಯ, ನಿವೃತ್ತ ನಿರ್ದೇಶಕರು, ಸಾರ್ವಜನಿಕ ಶಿಕ್ಷಣ ಇ ಲಾಖೆ (ಪ್ರೌಢ ಶಿಕ್ಷಣ) ಮತ್ತು ಇ ತರರ ವಿರುದ್ಧ ಇ ಲಾಖಾ ವಿಚಾರಣೆ-ವಿಚಾರಣಾಧಿಕಾರಿ ಮತ್ತು ಮಂಡನಾಧಿಕಾರಿಯವರನ್ನು ನೇಮಿಸುವ ಬಗ್ಗೆ.

**ಓದಲಾಗಿದೆ:** 1. ನೋಟೀಸ್ ಸಂಖ್ಯೆ:ಸಿಆಸುಇ 133 ಎಸ್‌ಇ ಎನ್ 2002, ದಿನಾಂಕ: 25-3-2003.

2. ನೋಟೀಸ್ ಸಂಖ್ಯೆ:ಸಿಆಸುಇ 133 ಎಸ್‌ಇ ಎನ್ 2003, ದಿನಾಂಕ:26-3-2003.

**ಪ್ರಸ್ತಾವನೆ:**

1997-98ನೇ ಸಾಲಿನಲ್ಲಿ ಶ್ರೀ ಬಿ.ಟಿ.ಪೆಮ್ಮಯ್ಯ, ನಿವೃತ್ತ ನಿರ್ದೇಶಕರು, ಸಾರ್ವಜನಿಕ ಶಿಕ್ಷಣ ಇ ಲಾಖೆ, ರವರು ಮೈಸೂರು ವಿಭಾಗದ ಸಹ ನಿರ್ದೇಶಕರಾಗಿ ಕರ್ತವ್ಯ ನಿರ್ವಹಿಸುತ್ತಿದ್ದ ಸಮಯದಲ್ಲಿ ಹಾಸನದ ಸಹ್ಯಾದ್ರಿ ದೈಹಿಕ ಶಿಕ್ಷಣ ಕಾಲೇಜಿನಲ್ಲಿ, ಎನ್.ಸಿ.ಟಿ.ಇ .ಮಾನ್ಯತೆ ಪಡೆಯದಿದ್ದರೂ ಅನಧಿಕೃತ ಕಾಲೇಜಿನ 30 ವಿದ್ಯಾರ್ಥಿಗಳನ್ನು ನಿಯಮಬಾಹಿರವಾಗಿ ಅನುಮೋದಿಸುವ ಮೂಲಕ, ಕರ್ನಾಟಕ ಮಾನ್ಯತೆ ಪಡೆಯದ ಮತ್ತು ಸಂಯೋಜಿತವಲ್ಲದ ಶಿಕ್ಷಣ ಸಂಸ್ಥೆಗಳ ವಿದ್ಯಾರ್ಥಿಗಳ ಪ್ರವೇಶ ಅಧಿನಿಯಮ 1992ರ ನಿಯಮ 3ನ್ನು ಉಲ್ಲಂಘಿಸಿದ ಆರೋಪಗಳಿಗಾಗಿ ಶ್ರೀ ಬಿ.ಟಿ.ಪೆಮ್ಮಯ್ಯ, ನಿವೃತ್ತ ನಿರ್ದೇಶಕರು, ಸಾರ್ವಜನಿಕ ಶಿಕ್ಷಣ ಇ ಲಾಖೆ ಹಾಗೂ ಇ ನ್ನಿತರರಾದ ಶ್ರೀ ಟಿ.ಸಿ.ಮುನಿಸ್ವಾಮಿ, ನಿವೃತ್ತ ವಿಭಾಗೀಯ ದೈಹಿಕ ಶಿಕ್ಷಣ ಅಧೀಕ್ಷಕರು, ಶ್ರೀ ಪ್ರಭು ಸೋನಾಳೆ ಪತ್ರಾಂಕಿತ ಸಹಾಯಕರು, ಶ್ರೀಮತಿ ಶೀಲಾ ಪತ್ರಾಂಕಿತ ವ್ಯವಸ್ಥಾಪಕರು, ಶ್ರೀಮತಿ ಎಂ.ಡಿ.ಶಾರದಾಂಬ, ವ್ಯವಸ್ಥಾಪಕರು, ಶ್ರೀ ಬಿ.ಶ್ರೀನಿವಾಸ ದ್ವಿತೀಯ ದರ್ಜೆ ಸಹಾಯಕರು, ಇ ವರುಗಳಿಗೆ ಮೇಲೆ(1) ಮತ್ತು (2)ರಲ್ಲಿ ಓದಲಾದ ದಿನಾಂಕ:25-3-2003 ಹಾಗೂ 26-3-2003 ರ ನೋಟೀಸನ್ನು ಜಾರಿ ಮಾಡಿ ಸಮಜಾಯಿಷಿ ಕೇಳುವ ಮೂಲಕ ಅವರ ವಿರುದ್ಧ ಇ ಲಾಖಾ ವಿಚಾರಣೆಯನ್ನು ಪ್ರಾರಂಭಿಸಲಾಯಿತು. ನೋಟೀಸಿಗೆ ಉತ್ತರ ಸಲ್ಲಿಸಿದ ಆರೋಪಿತ ಅಧಿಕಾರಿ/ನೌಕರರು ತಮ್ಮ ಮೇಲೆ ಹೊರಿಸಲಾದ ದೋಷಾರೋಪಣೆಯನ್ನು

ನಿರಾಕರಿಸಿರುತ್ತಾರೆ. ಆದ್ದರಿಂದ ಆರೋಪದಲ್ಲಿನ ಸತ್ಯಾಸತ್ಯತೆಯನ್ನು ವಿಚಾರಣೆ ಮೂಲಕ ತಿಳಿಯುವ ದೃಷ್ಟಿಯಿಂದ ವಿಚಾರಣೆಯನ್ನು ಮುಂದುವರಿಸಲು ಸರ್ಕಾರವು ತೀರ್ಮಾನಿಸಿ ಈ ಮುಂದಿನಂತೆ ಆದೇಶಿಸುತ್ತದೆ.

**ಆದೇಶ ಸಂಖ್ಯೆ:ಸಿಆಸುಇ 133 ಎಸ್ಇ ಎನ್ 2002 ಬೆಂಗಳೂರು, ದಿನಾಂಕ: 25ನೇ ಸೆಪ್ಟೆಂಬರ್ 2004**

ಪ್ರಸ್ತಾವನೆಯಲ್ಲಿ ವಿವರಿಸಲ್ಪಟ್ಟ ಸಂದರ್ಭಗಳಿಂದಾಗಿ ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಾವಳಿ 1957ರ ನಿಯಮ 13 ರೊಡನೆ ಓದಿಕೊಂಡಂತೆ ನಿಯಮ 11(2) ರಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಹಾಲಿ ಕಾರ್ಯ ನಿರ್ವಹಿಸುತ್ತಿರುವ ಅಧಿಕಾರಿ ನೌಕರರಾದ ಶ್ರೀ ಪ್ರಭು ಸೋನಾಳೆ ಪತ್ರಾಂಕಿತ ಸಹಾಯಕರು, ಶ್ರೀಮತಿ ಶೀಲಾ ಪತ್ರಾಂಕಿತ ವ್ಯವಸ್ಥಾಪಕರು, ಶ್ರೀಮತಿ ಎಂ.ಡಿ.ಶಾರದಾಂಬ ವ್ಯವಸ್ಥಾಪಕರು, ಶ್ರೀ ಬಿ.ಶ್ರೀನಿವಾಸ ದ್ವಿತೀಯ ದರ್ಜೆ ಸಹಾಯಕರು, ಇ ವರುಗಳ ವಿರುದ್ಧ. ಹಾಗೂ ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಾವಳಿ 13 ರೊಡನೆ ಓದಿಕೊಂಡಂತೆ ಕರ್ನಾಟಕ ನಾಗರೀಕ ಸೇವಾ ನಿಯಮಾವಳಿಯ ನಿಯಮ 214ನೇ ನಿಯಮದಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ನಿವೃತ್ತ ಅಧಿಕಾರಿಗಳಾದ ಶ್ರೀ ಬಿ.ಟಿ. ಪೆಮ್ಮಯ್ಯ ನಿವೃತ್ತ ನಿರ್ದೇಶಕರು ಸಾರ್ವಜನಿಕ ಶಿಕ್ಷಣ ಇ ಲಾಖೆ ಮತ್ತು ಶ್ರೀ ಟಿ.ಸಿ.ಮುನಿಸ್ವಾಮಿ ನಿವೃತ್ತ ವಿಭಾಗೀಯ ದೈಹಿಕ ಶಿಕ್ಷಣ ಅಧೀಕ್ಷಕರು ರವರುಗಳ ಬಗ್ಗೆ ಮೇಲೆ ಹೇಳಲಾದ ಆರೋಪಗಳ ಕುರಿತು ಜಂಟಿ ವಿಚಾರಣೆ ಮಾಡುವ ಸಲುವಾಗಿ ಸರ್ಕಾರವು ಶ್ರೀ ಟಿ.ಸಂತಾನಂ, ನಿವೃತ್ತ ಜಿಲ್ಲಾ ನ್ಯಾಯಾಧೀಶರು, ಇ ವರನ್ನು ವಿಚಾರಣಾಧಿಕಾರಿಯನ್ನಾಗಿ ಈ ಮೂಲಕ ನೇಮಿಸುತ್ತದೆ.

ಈ ವಿಚಾರಣೆಯನ್ನು 3 ತಿಂಗಳೊಳಗೆ ಪೂರ್ತಿಗೊಳಿಸಿ ಸರ್ಕಾರಕ್ಕೆ ವರದಿಯನ್ನು ಸಲ್ಲಿಸುವುದು. ಈ ವಿಚಾರಣೆಗಾಗಿ ಅವರು ಸರ್ಕಾರಿ ಆದೇಶ ಸಂಖ್ಯೆ:ಸಿಆಸುಇ 03 ಸೇಇ ವಿ 96 ದಿನಾಂಕ:24-04-1998 ರಂತೆ ರೂ. 5000/- ಗೌರವಧನ ಹಾಗೂ ಸರ್ಕಾರಿ ಆದೇಶ ಸಂಖ್ಯೆ:ಸಿಆಸುಇ 45 ಸೇಇ ವಿ 2001 ದಿನಾಂಕ:4-3-2002 ರಂತೆ ರೂ.1000/- ವಾಹನ ಭತ್ಯೆಯನ್ನು ಪಡೆಯುತ್ತಾರೆ.

ಶಿಸ್ತು ಪ್ರಾಧಿಕಾರಿಯ ಪರವಾಗಿ ಪ್ರಕರಣವನ್ನು ವಿಚಾರಣಾಧಿಕಾರಿಯವರ ಮುಂದೆ ಮಂಡಿಸಲು ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಾವಳಿ 1957ರ ನಿಯಮ 11(5) ರಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಸರ್ಕಾರವು ಶ್ರೀ ಮುಸ್ತಾಕ್ ಅಹಮದ್ ಉಪ ನಿರ್ದೇಶಕರು (ಪ್ರಭಾರ) ದೈಹಿಕ ಶಿಕ್ಷಣ, ಆಯುಕ್ತರ ಕಛೇರಿ ಸಾರ್ವಜನಿಕ ಶಿಕ್ಷಣ ಇ ಲಾಖೆ, ಬೆಂಗಳೂರು ಅವರನ್ನು ಮಂಡನಾಧಿಕಾರಿಯನ್ನಾಗಿ ಈ ಮೂಲಕ ನೇಮಿಸುತ್ತದೆ. ವಿಚಾರಣಾಧಿಕಾರಿಗಳಿಗೆ ಸ್ಥಳಾವಕಾಶ, ಶೀಘ್ರಲಿಪಿಗಾರರ ಸೇವೆ ಲೇಖನ ಸಾಮಗ್ರಿ ಇ ತ್ಯಾದಿಗಳನ್ನು ಒದಗಿಸಲು ಆಯುಕ್ತರು, ಸಾರ್ವಜನಿಕ ಶಿಕ್ಷಣ ಇ ಲಾಖೆ, ಬೆಂಗಳೂರು ಇ ವರು ಕ್ರಮ ಕೈಗೊಳ್ಳುತ್ತಾರೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎಚ್.ಆರ್.ನಾಗೇಂದ್ರ**

ಪಿ.ಆರ್. 1120

ಸರ್ಕಾರದ ಅಧೀನ ಕಾರ್ಯದರ್ಶಿ,

ಸಿಬ್ಬಂದಿ ಮತ್ತು ಆಡಳಿತ ಸುಧಾರಣಾ ಇ ಲಾಖೆ, (ಸೇವೆಗಳು-3).

## LABOUR SECRETARIAT

**Sub:-** Fixing of ceiling on medical expenses for family member of Insured Persons.

**Read:-** 1) Ltr.No:Abhivruddi/31/04-05, dtd:27-04-04, 15-06-2004 and 17-08-2004 from the Director, ESIS(M) Services, Karnataka, Bangalore.
2) Govt. Ltr.No: LD 259 LSI 2004, dtd:2-7-04.

**Preamble:-**

In Karnataka full medical care has been extended to 7,21,500 Insured Persons and about 40.00 lakhs of their families through a network of 9 ESI Hospitals and 125 ESI Dispensaries. The ESI Corporation reimburse 7/8$^{th}$ share of the total expenditure of the department subject to the ceiling limit of Rs.750/- per I.P/family w.e.f 1.4.04. Out of which Rs.50/- is earmarked for Super Speciality Treatment. During the year 2003-04, the State Govt. has made extra expenditure to the tune of Rs.398.18 lakhs for Super Speciality Treatment. Out of which Rs.2,20,66,310/- is incurred in respect of the family members of the Insured Person. The State Govt. is incurring additional expenditure over and above the ceiling limit fixed by ESI Corporation for Super Speciality Treatment and it is going on increasing day by day. The matter has also been discussed in the 97$^{th}$ Regional Board Meeting held on 6.2.04 and it was suggested to consider the proposal for fixing ceiling limit on medical expenses to the family members of Insured Person. Accordingly, the Director, ESIS (M) Services, Karnataka in the letters read above has suggested to fix a ceiling limit of Rs.1.00 lakh (Rupees One Lakh) for the medical expenses for the family of Insured Person to avoid extra burden to the State Govt.

The State Govt. vide letter read at (2) above has sought the opinion of ESI Corporation to fix the ceiling limit of Rs.1.00 lakh for the medical expenses of the family members of Insured Persons. But the opinion of ESI Corporation in this respect is not yet received.

**Govt. Order No: LD 259 LSI 2004, BANGALORE, Dated: 30th September 2004**

Government after examining the proposal of the Director, ESIS (M) Services, Karnataka in detail are pleased to issue the following orders to regulate the medical reimbursement cases of Super Speciality Treatment and treatment taken at Government/Tie-up/Private Hospitals in emergent situation.

I. A Special Scrutiny Committee is constituted at the Directorate level for review of the medical reimbursement bills on Super Speciality Treatment which includes:-

1) Deputy Director ESI Directorate - Chairperson
2) Additional Medical Superintendent ESI Model Hospital, Rajajinagar - Member
3) Concerned Dept. Specialist of ESI Model Hospital, Rajajinagar - Member
4) Complaint Officer Directorate of ESIS (M) Services - Member-Secretary

The following diseases are to be considered for the Super Speciality Treatment.

| Sl.No | Diseases |
|---|---|
| 1. | Myocardial infarction and other Cardiac diseases needing surgical treatment or Cardiac interventions |
| 2. | Acute Renal Failure and End Stage Renal disease |
| 3. | Severe Head/Spinal injuries and Crush injuries |
| 4. | Coma |
| 5. | Malignant Diseases |
| 6. | Neo-natal and Congenital emergencies including conditions needing Plastic surgery (for curative purpose only) |
| 7. | Posterior Segment diseases and injuries of Eye |
| 8. | Blood diseases |
| 9. | Acute Poisoning |
| 10. | E.N.T.total Laryngectomy and Stepidectomy |
| 11. | Congenital Anomalies Life saving & Surgically correctable cases have to be treated, excluding cosmetic surgety. But it should be restricted to two children, born after coverage. |
| 12. | Hormone deficiency & Pituitary Adenoma |

| Sl. No. | Investigations |
|---|---|
| 1. | 2-D Echo Color Doppler |
| 2. | T.E.E |
| 3. | Holter Monitor |
| 4. | R.N.V |
| 5. | Stress Thalium and other |
| 6. | 22. Angiograms |
| 7. | C.A.G |
| 8. | Cardiac Catheterisation |
| 9. | C.T.Scan |
| 10. | MRI Scan |
| 11. | Tissue Typing |
| 12. | Hormonal Evaluation |
| 13. | Evaluation of certain drug level assay |
| 14. | Fluorescence Angiography (FFA) |
| 15. | Collagen Profile. Allergy Tests. |
| 16. | Special Culture and |
| 17. | Sensitivity Tests |
| 18. | H.I.V. western Blot. |
| 19. | Hepatic Profile. |
| 20. | Special Biopsy tests |
| 21. | Isotope investigations |

**III. Procedure to be followed in referring cases for Super Speciality Treatment:-**

1) The Special Scrutiny Committee constituted at the Directorate level should verify the cases which are to be referred for Super Speciality Treatment.
2) While referring the patient to a higher center or Super Speciality hospital, the Capitation letter has to be signed by the consultant and Head of the Department. If, Head of Department is not available in such cases one more consultant of the same department has to sign the Capitation Letter and send through the hospital Superintendent.
3) Cases which require Intensive Care Unit (ICU) facilities as recommended by the Anesthetist, in such case the Capitation Letter should be signed, both by the Surgeon and the Anesthetist for referring the patient to other centers.
4) The Insured Person is eligible for Full Medical Benefit.
5) For the family member, the medical expenditure is restricted to Rs.1,00,000/- for a financial year for Super Speciality Treatment and it should not be cumulative. However, in deserving cases where the maximum ceiling to be relaxed the Special Scrutiny Committee should examine and refer such cases to Govt. with full justification for relaxation of this ceiling limit, while examining such cases the State Medical Commissioner of ESI Corporation may be included in the Committee as Special Invitee.

**IV. Identification of Emergency Diseases for reimbursement of Medical expenses:-**

i) Cases referred to other government/recognised/Tie-up/Private hospitals, by ESI Hospital should be re-imbursed as per rules.

ii) The following cases may be considered for re-imbursement in “EMERGENCY ADMISSIONS”

1) Myocardial Infarction
2) Severe Head/Spinal injuries
3) Ruptured Ectopic Pregnancy
4) Acute Poisoning
5) Snake Bite
6) Cerebral Hemorrhage
7) ICU required cases until stabilisation
8) Road Traffic Accident (RTA)

iii) Patients who are admitted directly in an emergency to a private/government/recognised/tie-up hospitals, without referral from any of the ESI Hospitals have to incur the expenditure and submit the bills for re-imbursement.

iv) 20% cut on admissible bills which are on par with Government/tie-up hospital tariff will be imposed, where the patient was admitted on emergency directly without referrals/regularisation.

v) Reimbursement of expenses in cases which are neither referred by ESI Hospital nor an emergency case, and the disease they are suffering from, is treatable in ESI Hospitals should not be allowed at all.

vi) However, if circumstances are justified the cases may be settled on a case to case basis by Special Review Committee. Besides the above, the guidelines already contained in the Medical Manual may be followed.

These orders shall be effective from the date of issue of the order.

By Order and in the name of the Governor of Karnataka,
**H.VISWANATH**
Under Secretary to Government, Labour Department.

PR-1128

**ಲೋಕೋಪಯೋಗಿ ಸಚಿವಾಲಯ**

**ವಿಷಯ:** ಶ್ರೀ ಕೆ. ಎನ್. ಕೀರ್ತಿ, ಪದವೀಧರ ಇಂಜಿನಿಯರ್ (ಎಂ.ಆರ್.ಇ) ಇವರ ಸೇವೆಯನ್ನು ಸಕ್ರಮಗೊಳಿಸುವ ಬಗ್ಗೆ.

**ಸರ್ಕಾರಿ ಆದೇಶ ಸಂಖ್ಯೆ: ಲೋಇ 30 ಪಿಡಬ್ಲ್ಯುಸಿ 2004, ಬೆಂಗಳೂರು ದಿನಾಂಕ: 29ನೇ ಸೆಪ್ಟೆಂಬರ್ 2004**

**ಓದಲಾಗಿದೆ:**
1. ಸರ್ಕಾರದ ಆದೇಶ ಸಂಖ್ಯೆ: ಸಿಆಸುಇ:13:ಎಸ್ಎಲ್ಸಿ:94 ದಿನಾಂಕ 29.9.94
2. ಸರ್ಕಾರದ ಆದೇಶ ಸಂಖ್ಯೆ: ಪಿಡಬ್ಲ್ಯುಡಿ 357 ಪಿಡಬ್ಲ್ಯುಸಿ 90 ದಿನಾಂಕಃ 2.12.94
3. ಸರ್ಕಾರದ ಪತ್ರ ಸಂಖ್ಯೆ:ಪಿಡಬ್ಲ್ಯುಡಿ 201 ಪಿಡಬ್ಲ್ಯುಸಿ 95, ದಿನಾಂಕಃ 2.7.94, 1.9.95 ಮತ್ತು 13.9.95.
4. ಮುಖ್ಯ ಇಂಜಿನಿಯರ್, ಸಂಪರ್ಕ ಮತ್ತು ಕಟ್ಟಡ(ದ) ಬೆಂಗಳೂರು ಇವರ ಪತ್ರ ಸಂಖ್ಯೆ: ಸಿಬಿಎಸ್ :314:ಇಎಸ್ ಎಂ:ದಿನೌಸೇ: 2000–01

**ಪ್ರಸ್ತಾವನೆ:**

ಮೇಲೆ ಓದಲಾದ ಕ್ರಮ ಸಂಖ್ಯೆ (1)ರ ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆಯ ಆದೇಶದಲ್ಲಿ ಸರ್ವೋಚ್ಚ ನ್ಯಾಯಾಲಯದ ರಿಟ್ ಅರ್ಜಿ ಸಂಖ್ಯೆ: 737:90, 738:90, 1038:90 ಮತ್ತು 297:91 ರಲ್ಲಿ ನೀಡಿರುವ ಆದೇಶದನ್ವಯ ದಿನಾಂಕ 1.7.84ರ ನಂತರ ಹಾಗೂ 15.10.92ಕ್ಕೆ ಮೊದಲು ದಿನಗೂಲಿಯಲ್ಲಿ ನೇಮಕ ಹೊಂದಿದ ಪದವೀಧರ ಮತ್ತು ಡಿಪ್ಲೋಮಾ ಇಂಜಿನಿಯರ್‌ರನ್ನು ಹಲವು ಷರತ್ತುಗಳಿಗೆ ಒಳಪಟ್ಟಂತೆ ಮಾಸಿಕ ವೇತನ ವ್ಯವಸ್ಥೆಗೆ ಒಳಪಡಿಸಲು ಆದೇಶಿಸಿದೆ.

ಕ್ರಮ ಸಂಖ್ಯೆ: (1) ರಲ್ಲಿ ಓದಲಾದ ಸಿ.ಆ.ಸು.ಇಲಾಖೆಯ ಆದೇಶಾನುಸಾರ ಕ್ರಮ ಸಂಖ್ಯೆ (2)ರ ಆದೇಶದಲ್ಲಿ ಲೋಕೋಪಯೋಗಿ ಮತ್ತು ನೀರಾವರಿ ಇಲಾಖೆಗಳಲ್ಲಿ ದಿನಾಂಕ 1.7.84ರ ನಂತರ 15.10.92ಕ್ಕೆ ಮುಂಚೆ ನೇಮಕ ಹೊಂದಿದ ಪದವೀಧರ ಹಾಗೂ ಡಿಪ್ಲೋಮಾ ಇಂಜಿನಿಯರ್‌ರನ್ನು ದಿನಾಂಕ 29.9.94ರಿಂದ ಜಾರಿಗೆ ಬರುವಂತೆ ಮಾಸಿಕ ವೇತನ ವ್ಯವಸ್ಥೆಗೆ ಒಳಪಡಿಸಿ ಆದೇಶವನ್ನು ಹೊರಡಿಸಲಾಗಿದೆ. ದಿನಾಂಕ 29.9.94ರ ಆದೇಶದಲ್ಲಿನ ಕಂಡಿಕೆ 6 ಮತ್ತು 7 ರಲ್ಲಿ ದಿನಗೂಲಿ ಸೇವೆಯಲ್ಲಿ 10 ವರ್ಷಗಳ ಸತತ ಸೇವೆ ಸಲ್ಲಿಸಿದ ದಿನಗೂಲಿ ಅಭಿಯಂತರರನ್ನು ಕ್ರಮಬದ್ಧಗೊಳಿಸಲು ಸಹ ಆದೇಶಿಸಲಾಗಿದೆ. ಪದವೀಧರ ಇಂಜಿನಿಯರ್‌ರಿಗೆ ಸಂಬಂಧಿಸಿದಂತೆ ಸರ್ಕಾರದ ವತಿಯಿಂದಲೂ ಹಾಗೂ ಡಿಪ್ಲೋಮಾ ಇಂಜಿನಿಯರ್‌ರಿಗೆ ಸಂಬಂಧಿಸಿದಂತೆ ಆಯಾ ಮುಖ್ಯ ಇಂಜಿನಿಯರ್‌ರವರು ಸೂಕ್ತ ಕ್ರಮ ತೆಗೆದುಕೊಳ್ಳುವಂತೆ ನಿರ್ದೇಶಿಸಲಾಗಿದೆ.

ಕ್ರಮ ಸಂಖ್ಯೆ: (3) ರಲ್ಲಿ ಓದಲಾದ ಪತ್ರಗಳಲ್ಲಿ ಹತ್ತು ವರ್ಷಗಳ ಸತತ ಸೇವೆ ಸಲ್ಲಿಸಿದ ದಿನಗೂಲಿ ಅಭಿಯಂತರರನ್ನು ಕ್ರಮಬದ್ಧಗೊಳಿಸುವ ಸಲುವಾಗಿ ಸರ್ಕಾರಕ್ಕೆ ಪ್ರಸ್ತಾವನೆಯನ್ನು ಸಲ್ಲಿಸುವಂತೆ ಲೋಕೋಪಯೋಗಿ ಮತ್ತು ನೀರಾವರಿ ಇಲಾಖೆಗಳ ಎಲ್ಲಾ ಮುಖ್ಯ ಇಂಜಿನಿಯರ್‌ಗಳನ್ನು ಕೋರಲಾಗಿದೆ.

ಅದರಂತೆ ಕ್ರಮ ಸಂಖ್ಯೆ: (4) ರಲ್ಲಿ ಓದಲಾದ ಪತ್ರದಲ್ಲಿ ಮುಖ್ಯ ಇಂಜಿನಿಯರ್, ಸಂಪರ್ಕ ಮತ್ತು ಕಟ್ಟಡ(ದ) ಬೆಂಗಳೂರು ಇವರಿಂದ ಸ್ವೀಕೃತವಾದ ಪ್ರಸ್ತಾವನೆಯನ್ನು ಪರಿಶೀಲಿಸಿ ಸಿ.ಆ.ಸು.ಇಲಾಖೆಯ ಸಂಖ್ಯೆ: ಡಿಪಿಎಆರ್:13:ಎಸ್ಎಲ್ಸಿ 94 ದಿನಾಂಕ 29.9.94 ಹಾಗೂ ಪಿಡಬ್ಲುಡಿ 357 ಪಿಡಬ್ಲುಸಿ 90 ದಿನಾಂಕ 2.12.94ರ ಆದೇಶದನ್ವಯ ಮಾಸಿಕ ವೇತನದಡಿಯಲ್ಲಿ ಕೆಲಸ ಮಾಡುತ್ತಿರುವ ಪದವೀಧರ ಇಂಜಿನಿಯರ್‌ರನ್ನು ಸಕ್ರಮ ಸೇವೆಯಲ್ಲಿ ವಿಲೀನಗೊಳಿಸಲು ನಿರ್ಧರಿಸಿ ಸರ್ಕಾರವು ಈ ಕೆಳಕಂಡಂತೆ ಆದೇಶಿಸುತ್ತದೆ.

**ಆದೇಶ**

ಪ್ರಸ್ತಾವನೆಯಲ್ಲಿ ವಿವರಿಸಿದ ಕಾರಣಗಳ ಹಿನ್ನೆಲೆಯಲ್ಲಿ ಲೋಕೋಪಯೋಗಿ ಇಲಾಖೆಗಳಲ್ಲಿ ದಿನಾಂಕ 1.7.84ರ ನಂತರ ಹಾಗೂ 15.10.92ಕ್ಕೆ ಮುಂಚೆ ದಿನಗೂಲಿ ಆಧಾರದ ಮೇಲೆ ನೇಮಕಗೊಂಡು ಮಾಸಿಕ ವೇತನ ವ್ಯವಸ್ಥೆಯಡಿಯಲ್ಲಿ ಕೆಲಸ ನಿರ್ವಹಿಸುತ್ತಿರುವ ಹಾಗೂ ಸರ್ಕಾರದ ಆದೇಶ ಸಂಖ್ಯೆ: ಸಿಆಸುಇ:13:ಎಸ್ಎಲ್ಸಿ:94 ದಿನಾಂಕ 29.9.94ರ ಆದೇಶಗಳಲ್ಲಿ ವಿಧಿಸಿರುವ ಷರತ್ತುಗಳನ್ನು ಪೂರೈಸಿದ ಈ ಕೆಳಕಂಡ ಪದವೀಧರ ಇಂಜಿನಿಯರ್‌ರನ್ನು ಅವರ ಮುಂದೆ ಸೂಚಿಸಲಾಗಿರುವ ದಿನಾಂಕದಿಂದ ಸಕ್ರಮ ಸೇವೆಯಲ್ಲಿ ವಿಲೀನಗೊಳಿಸಲಾಗಿದೆ.

| ಕ್ರಮ ಸಂಖ್ಯೆ | ಹೆಸರು | ದಿನಗೂಲಿಗೆ ಸೇರಿದ ದಿನಾಂಕ | 10 ವರ್ಷ ಸೇವೆ ಪೂರೈಸಿದ ದಿನಾಂಕ | ಕ್ರಮಬದ್ಧಗೊಂಡ ದಿನಾಂಕ | ಕಾರ್ಯ ನಿರ್ವಹಿಸುತ್ತಿರುವ ಸ್ಥಳ |
|---|---|---|---|---|---|
| 1. | ಶ್ರೀ ಕೆ.ಎನ್. ಕೀರ್ತಿ ಪದವೀಧರ ಇಂಜಿನಿಯರ್ | 16.3.86<br>26.2.87 | 26.2.97 | 26.2.97 | ಸಣ್ಣ ನೀರಾವರಿ ಉಪ ವಿಭಾಗ, ಚಿಕ್ಕಬಳ್ಳಾಪುರ |

ಸದರಿ ನೌಕರರಿಗೆ ಆದೇಶ ಹೊರಡಿಸಿದ ದಿನಾಂಕದಿಂದ ಆರ್ಥಿಕ ಸೌಲಭ್ಯ ಹಾಗೂ ಸೇವಾ ಹಿರಿತನವನ್ನು ನೀಡಲು ಪರಿಗಣಿಸತಕ್ಕದ್ದು.

ಸಕ್ರಮ ಸೇವೆಯಲ್ಲಿ ವಿಲೀನಗೊಂಡ ನಂತರ ಮೇಲ್ಕಂಡ ಸಹಾಯಕ ಇಂಜಿನಿಯರ್‌ರನ್ನು ಮುಖ್ಯ ಇಂಜಿನಿಯರ್, ಸಂಪರ್ಕ ಮತ್ತು ಕಟ್ಟಡ(ದ) ಬೆಂಗಳೂರು ಇವರ ವಶಕ್ಕೆ ನೀಡಿ ಮುಂದಿನ ಸ್ಥಳ ನಿಯುಕ್ತಿ ಆದೇಶ ನೀಡಲು ಕ್ರಮ ತೆಗೆದುಕೊಳ್ಳುವಂತೆ ಆದೇಶಿಸಿದೆ. ಇವರು ಮುಖ್ಯ ಇಂಜಿನಿಯರ್, ಸಂಪರ್ಕ ಮತ್ತು ಕಟ್ಟಡ(ದ) ಬೆಂಗಳೂರು ಇವರಲ್ಲಿ ಕಾರ್ಯವರದಿ ಮಾಡುವುದು.

ಈ ಆದೇಶವನ್ನು ಸಿಆಸುಇ:13:ಎಸ್‌ಎಲ್‌ಸಿ:94 ದಿನಾಂಕ 29.9.94ರ ಆದೇಶದನ್ವಯ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ
**ಎಸ್. ಚಂದ್ರಶೇಖರಪ್ಪ**
ಸರ್ಕಾರದ ಅಧೀನ ಕಾರ್ಯದರ್ಶಿ
ಲೋಕೋಪಯೋಗಿ ಇಲಾಖೆ(ಸೇವೆಗಳು-ಸಿ)

ಪಿ.ಆರ್. 1130

**ವಾಣಿಜ್ಯ ಮತ್ತು ಕೈಗಾರಿಕೆ ಸಚಿವಾಲಯ**

**ವಿಷಯ:-** ಶ್ರೀ ಸೈಯದ್ ಇಸ್ಫಾಕ್ ಅಹಮದ್, ಆಡಳಿತಾಧಿಕಾರಿ, ಕರ್ನಾಟಕ ಅಲ್ಪಸಂಖ್ಯಾತರ ಅಭಿವೃದ್ಧಿ ನಿಗಮ ನಿಯಮಿತ, ಬೆಂಗಳೂರು, ಇವರ ವಿರುದ್ಧ ದಾಖಲಾದ ಟ್ರ್ಯಾಪ್ ಪ್ರಕರಣದ ಅಭಿಯೋಜನಾ ಮಂಜೂರಾತಿ ಕುರಿತು.

**ಓದಲಾಗಿದೆ:-**
1) ಪೋಲೀಸ್ ಮಹಾನಿರೀಕ್ಷಕರು, ಕರ್ನಾಟಕ ಲೋಕಾಯುಕ್ತ, ಬೆಂಗಳೂರು, ಇವರ ಪತ್ರಸಂಖ್ಯೆ: ಲೋಕ್/ಐಎನ್‌ವಿ/ಜಿ/ಸಿಟಿ/ಕ್ರೈಂ.1/2004, ದಿನಾಂಕ:07-06-2004.
2) ತನಿಖಾಧಿಕಾರಿ, ಕರ್ನಾಟಕ ಲೋಕಾಯುಕ್ತ, ಇವರ ವರದಿ ದಿನಾಂಕ:26-03-2004.
3) ತನಿಖಾ ದಾಖಲೆಗಳ ನಕಲುಗಳಾದ ಫಿರ್ಯಾದು, ಪ್ರಥಮ ವರ್ತಮಾನ ವರದಿ, ಪ್ರಾಯೋಗಿಕ ಪಂಚನಾಮೆ, ಜಪ್ತಿ ಪಂಚನಾಮೆ, ಸ್ವತ್ತುಗಳ ಪಟ್ಟಿ, ರಾಸಾಯನಿಕ ಪರೀಕ್ಷಕರ ವರದಿ, ಸಾಕ್ಷಿದಾರರ ಹೇಳಿಕೆಗಳು, ಲಂಚದ ಬೇಡಿಕೆಗೆ ಸಂಬಂಧಪಟ್ಟ ಕಡತಗಳು.

**ಪ್ರಸ್ತಾವನೆ:-**

ಶ್ರೀ ಸೈಯದ್ ಇಸ್ಫಾಕ್ ಅಹಮದ್, ಆಡಳಿತಾಧಿಕಾರಿ, ಕರ್ನಾಟಕ ಅಲ್ಪಸಂಖ್ಯಾತರ ಅಭಿವೃದ್ಧಿ ನಿಗಮ ನಿಯಮಿತ, ಬೆಂಗಳೂರು, (ಜಂಟಿ ನಿರ್ದೇಶಕರು, ಕೈಗಾರಿಕೆ ಮತ್ತು ವಾಣಿಜ್ಯ ಇಲಾಖೆ) ಇವರ ವಿರುದ್ಧ ಗುನ್ನೆ ಸಂಖ್ಯೆ:ಲೋ.ಮಾ.1/2004 ರಲ್ಲಿ ಆರಕ್ಷಕ ನಿರೀಕ್ಷಕರು, ಪೋಲೀಸ್ ವಿಭಾಗ, ಕರ್ನಾಟಕ ಲೋಕಾಯುಕ್ತ, ಬೆಂಗಳೂರು, ಪೋಲೀಸ್ ಠಾಣೆಯಲ್ಲಿ ದಾಖಲಿಸಿರುವ ಪ್ರಕರಣದ ತನಿಖಾಧಿಕಾರಿಯ ಅಂತಿಮ ವರದಿಯ ನಕಲು ಮತ್ತು ತನಿಖಾ ದಾಖಲಾತಿಗಳನ್ನು (ಉಲ್ಲೇಖ 2, ಮತ್ತು 3) ಪೋಲೀಸ್ ಮಹಾನಿರೀಕ್ಷಕರು, ಪೋಲೀಸ್ ವಿಭಾಗ, ಕರ್ನಾಟಕ ಲೋಕಾಯುಕ್ತ, ಬೆಂಗಳೂರು, ಇವರು ತಮ್ಮ ಪತ್ರ ಸಂಖ್ಯೆ: ಲೋಕ್/ಐಎನ್‌ವಿ/ಜಿ/ಸಿಟಿ/ಕ್ರೈಂ.1/2004, ದಿನಾಂಕ:07-06-2004 (ಉಲ್ಲೇಖ-1) ರೊಡನೆ ಕಳುಹಿಸುತ್ತಾ ಆಪಾದಿತನನ್ನು ಘನ ನ್ಯಾಯಾಲಯದಲ್ಲಿ ಅಭಿಯೋಜನೆಗೆ ಒಳಪಡಿಸಲು ಲಂಚ ನಿರೋಧಕ ಕಾಯ್ದೆ 1988ರ 19ನೆಯ ಕಲಂನ ಅಡಿಯಲ್ಲಿ ಮಂಜೂರಾತಿಗಾಗಿ ಈ ಪ್ರಾಧಿಕಾರವನ್ನು ಕೋರಿರುತ್ತಾರೆ.

ಸರ್ಕಾರವು ಪೋಲೀಸ್ ಮಹಾನಿರೀಕ್ಷಕರು, ಪೋಲೀಸ್ ವಿಭಾಗ, ಕರ್ನಾಟಕ ಲೋಕಾಯುಕ್ತ, ಬೆಂಗಳೂರು, ಇವರು ತಮ್ಮ ಉಲ್ಲೇಖಿತ ಪತ್ರಸಂಖ್ಯೆ:ಲೋಕ್/ಐಎನ್‌ವಿ/ ಜಿ/ಸಿಟಿ/ ಕ್ರೈಂ.1/2004, ದಿನಾಂಕ:07-04-2004ದೊಂದಿಗೆ ಕಳುಹಿಸಿಕೊಟ್ಟ ಕೆಳಕಂಡ ದಾಖಲಾತಿಗಳನ್ನು ಪರಿಶೀಲಿಸಲಾಗಿದೆ.

ಅ) ಶ್ರೀ ಸಮೀಉಲ್ಲಾ ಬಿನ್ ಸಯ್ಯದ್ ಚೂಟ್‌ಸಾಬ್, ನಂ247, 4ನೇ ಕ್ರಾಸ್, ವಿನೋಬನಗರ, ಕೆ.ಜಿ.ಹಳ್ಳಿ ಪೋಲೀಸ್ ಠಾಣೆ, ಬೆಂಗಳೂರು, ದಿನಾಂಕ:02-01-2004.
ಆ) ಪ್ರಥಮ ವರ್ತಮಾನ ವರದಿ ಬೆಂಗಳೂರು (ಸ್ಥಳ) ಲೋಕಾಯುಕ್ತ ಪೋಲೀಸ್ ಠಾಣೆ ಪ್ರಕರಣ ಸಂಖ್ಯೆ:01/2004.
ಇ) ಪ್ರಾಯೋಗಿಕ ಪಂಚನಾಮೆ ದಿನಾಂಕ:02-01-2004
ಈ) ಟ್ರ್ಯಾಪ್‌ನ ಮಹಜರ್ ದಿನಾಂಕ:02-01-2004.
ಉ) ರಾಸಾಯನಿಕ ಪರೀಕ್ಷಕರ ಪರೀಕ್ಷಣಾ ವರದಿ ಸಂಖ್ಯೆ:ಸಿಎಂಇ/ಲೋಕ್/54/2003-04,
ಊ) ಕೃತ್ಯ ನಡೆದ ಸ್ಥಳದ ನಕಾಶೆ.
ಋ) ಸಾಕ್ಷಿಗಳ ಹೇಳಿಕೆಗಳು
ಎ) ಲಂಚ ಕೇಳಲು ಆಧಾರವಾದ ಕಡತ ಅಥವಾ ದಾಖಲೆಗಳು.
ಏ) ಆಪಾದಿತರ ಸಮಜಾಯಿಷಿ ಹೇಳಿಕೆಗಳು

ಆಪಾದಿತರಾದ ಶ್ರೀ ಸೈಯದ್ ಇಸ್ಫಾಕ್ ಅಹಮದ್, ಇವರು ಫಿರ್ಯಾದಿಯಾದ ಶ್ರೀ ಸಮೀಉಲ್ಲಾ, ಬಿನ್ ಸೈಯದ್ ಚೂಟ್‌ಸಾಬ್, ನಂ.247, 4ನೇ ಕ್ರಾಸ್, ವಿನೋಬ ನಗರ, ಕೆ.ಜಿ.ಹಳ್ಳಿ ಪೋಲೀಸ್ ಠಾಣೆ, ಬೆಂಗಳೂರು, ಇವರಿಗೆ ಸಾಲ

ವಸೂಲಾತಿ ಮಾಡುವ ಗುತ್ತಿಗೆ ಆದೇಶವನ್ನು ನೀಡಲು ರೂ.15,000.00ಗಳ ಅಕ್ರಮ ಸಂಭಾವನೆಯನ್ನು ಕೇಳಿರುತ್ತಾರೆ. ಫಿರ್ಯಾದಿಯು ಲಂಚವನ್ನು ಕೊಡಲು ಬಯಸದ ಕಾರಣ ಸದರಿ ಸರ್ಕಾರಿ ಅಧಿಕಾರಿಯ ವಿರುದ್ಧ ಕಾನೂನು ಕ್ರಮ ಕೈಗೊಳ್ಳುವ ಬಗ್ಗೆ ದೂರನ್ನು ಸಲ್ಲಿಸಿದ್ದು, ಸದರಿ ದೂರಿನಂತೆ ತನಿಖಾಧಿಕಾರಿಗಳು ಬಲೆ ಬೀಸುವ ಮೊದಲಿನ ಎಲ್ಲಾ ಔಚಿತ್ಯಪೂರ್ಣ ಕಾರ್ಯಕ್ರಮಗಳನ್ನು ನೆರವೇರಿಸಿದ ನಂತರ ದಿನಾಂಕ:02–01–2004ರಂದು ಬೆಂಗಳೂರಿನಲ್ಲಿ ಬೀಸಿದ ಟ್ರ್ಯಾಪ್ ಯಶಸ್ವಿಯಾಗಿ ಶ್ರೀ ಸೈಯದ್ ಇಸ್ಫಾಕ್ ಅಹಮದ್, ಇವರು ಅಕ್ರಮ ಸಂಭಾವನೆಯಾದ ರೂ.15,000.00 ಗಳನ್ನು ಸದರಿ ಕೆಲಸವನ್ನು ಮಾಡಲು ಕೇಳಿ ಪಡೆಯುತ್ತಿದ್ದಾಗ ಸಿಕ್ಕಿಹಾಕಿಕೊಂಡಿರುತ್ತಾರೆ. ಆಪಾದಿತ ಸರ್ಕಾರಿ ಅಧಿಕಾರಿಯ ಬಲಗೈ ಮತ್ತು ಎಡಗೈ ಬೆರಳುಗಳನ್ನು ಹಾಗೂ ಅವರ ಪ್ಯಾಂಟಿನ ಜೇಬನ್ನು ಸೋಡಿಯಂ ಕಾರ್ಬೋನೇಟ್ ದ್ರಾವಣದಲ್ಲಿ ಮಾರ್ಜನೆ ಮಾಡಿ ಫಿನಾಫ್ತಲೀನ್ ಪರೀಕ್ಷೆಗೆ ಒಳಪಡಿಸಿದಾಗ ಅದು ಸಕಾರಾತ್ಮಕವಾಗಿ ಪ್ರತಿಕ್ರಿಯಿಸಿದ್ದು, ರಾಸಾಯನಿಕ ತಜ್ಞರ ಪರೀಕ್ಷಣಾ ವರದಿಯಿಂದಲೂ ಸಹ ದೃಢಪಟ್ಟಿರುತ್ತದೆ. ನೆರಳು ಸಾಕ್ಷಿಯು ಅಕ್ರಮ ಸಂಭಾವನೆಯ ಬೇಡಿಕೆ ಮತ್ತು ಪಡೆಯುವಿಕೆಗೆ ಸಂಬಂಧಿಸಿದಂತೆ ಫಿರ್ಯಾದಿ ಹಾಗೂ ಆಪಾದಿತ ಸರ್ಕಾರಿ ನೌಕರರ ನಡುವಿನ ವ್ಯವಹಾರವನ್ನು ಗಮನಿಸಿರುತ್ತಾರೆ ಮತ್ತು ಸಂಭಾಷಣೆಯನ್ನು ಆಲಿಸಿರುತ್ತಾರೆ. ಅಕ್ರಮ ಸಂಭಾವನೆಯಾದ ರೂ.15,000.00 ಗಳನ್ನು ಶ್ರೀ ಸೈಯದ್ ಇಸ್ಫಾಕ್ ಅಹಮದ್, ಇವರಿಂದ ಆಡಳಿತಾಧಿಕಾರಿ, ಕರ್ನಾಟಕ ಅಲ್ಪಸಂಖ್ಯಾತರ ಅಭಿವೃದ್ಧಿ ನಿಗಮ ನಿಯಮಿತ, ಬೆಂಗಳೂರು, ಇಲ್ಲಿ ಪಂಚರ ಸಮಕ್ಷಮ ವಶಪಡಿಸಿಕೊಳ್ಳಲಾಗಿದೆ.

ಈ ಎಲ್ಲಾ ಕಾರಣಗಳಿಂದ ಆಪಾದಿತರು ಲಂಚ ನಿರೋಧಕ ಕಾಯ್ದೆ 1988ರ ಕಲಂ 7, 13 (1) (ಡಿ) ಜೊತೆಗೆ ಓದಲಾದ ಕಲಂ 13 (2)ರ ಅಡಿಯಲ್ಲಿ ಶಿಕ್ಷಾರ್ಹ ಅಪರಾಧವನ್ನು ಎಸಗಿರುವುದು ಮೇಲ್ನೋಟಕ್ಕೆ ನನಗೆ ಸಂಪೂರ್ಣವಾಗಿ ಮನವರಿಕೆಯಾಗಿದೆ. ಆದ್ದರಿಂದ, ಇವರನ್ನು ಲಂಚನಿರೋಧಕ ಕಾಯ್ದೆ 1988ರನ್ವಯ ಕಲಂ 7, 13 (1) (ಡಿ) ಜೊತೆಗೆ 13 (2)ರ ಅಡಿಯಲ್ಲಿ ಅಭಿಯೋಜನೆಗೆ ಒಳಪಡಿಸುವುದು ಅವಶ್ಯ ಎಂದು ಸರ್ಕಾರ ಮನಗಂಡಿದೆ.

ಸಕ್ಷಮ ಪ್ರಾಧಿಕಾರವಾದ ನಾನು ಆಪಾದಿತನನ್ನು ಕೆಲಸದಿಂದ ತೆಗೆದು ಹಾಕಲು ಅಧಿಕಾರವುಳ್ಳದ್ದಾಗಿದೆ. ಆದ್ದರಿಂದ, ಲಂಚ ನಿರೋಧ ಕಾಯ್ದೆ 1988ರ ಕಲಂ 19 (1) (ಬಿ)ರ ಅಡಿ ಆಪಾದಿತ ನೌಕರನಾದ ಶ್ರೀ ಸೈಯದ್ ಇಸ್ಫಾಕ್ ಅಹಮದ್, ರವರನ್ನು ಕಲಂ 7 ಮತ್ತು 13 (1) (ಡಿ) ಜೊತೆಗೆ 13 (2)ರ ಅಡಿಯಲ್ಲಿ ಅಭಿಯೋಜನೆಗೆ ಒಳಪಡಿಸಲು ಸರ್ಕಾರವು ಈ ಕೆಳಕಂಡಂತೆ ಮಂಜೂರಾತಿ ಆದೇಶ ನೀಡಿದೆ.

**ಸರ್ಕಾರದ ಆದೇಶ ಸಂಖ್ಯೆ:ವಾಕೈ 09 ಕೈಸೇವಿ 2004, ಬೆಂಗಳೂರು, ದಿನಾಂಕ: 5ನೇ ಅಕ್ಟೋಬರ್ 2004**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳಿಂದಾಗಿ, ಆರೋಪಿಯಾದ ಶ್ರಿ ಸೈಯದ್ ಇಸ್ಫಾಕ್ ಅಹಮದ್, ಜಂಟಿ ನಿರ್ದೇಶಕರು, ಕೈಗಾರಿಕೆ ಮತ್ತು ವಾಣಿಜ್ಯ ಇಲಾಖೆ, ನಿಯೋಜನೆ ಮೇಲೆ ಆಡಳಿತಾಧಿಕಾರಿ, ಕರ್ನಾಟಕ ಅಲ್ಪಸಂಖ್ಯಾತರ ಅಭಿವೃದ್ಧಿ ನಿಗಮ ನಿಯಮಿತ, ಬೆಂಗಳೂರು, ಇವರನ್ನು ಜಂಟಿ ನಿರ್ದೇಶಕರು, ಹುದ್ದೆಯಿಂದ ತೆಗೆದು ಹಾಕುವ (ವಜಾ ಮಾಡುವ) ಅಧಿಕಾರವುಳ್ಳ ಸಕ್ಷಮ ಪ್ರಾಧಿಕಾರವಾದ ಸರ್ಕಾರವು, ಶ್ರೀ ಸೈಯದ್ ಇಸ್ಫಾಕ್ ಅಹಮದ್, ಜಂಟಿ ನಿರ್ದೇಶಕರು, ಇವರನ್ನು ಲಂಚ ನಿರೋಧಕ ಕಾಯ್ದೆ 1988ರ ಕಲಂ 7, 13 (1) (ಡಿ) ಜೊತೆಯಲ್ಲಿ ಓದಲಾದ ಕಲಂ 13 (2)ರ ಪ್ರಕಾರ ಶಿಕ್ಷಾರ್ಹ ಅಪರಾಧಕ್ಕಾಗಿ ಅಭಿಯೋಗಗೊಳಿಸಲು ಸದರಿ ಕಾಯ್ದೆಯ ಕಲಂ 19 (1) (ಬಿ) ರನ್ವಯ ಮಂಜೂರಾತಿ ನೀಡಿದೆ.

ಕರ್ನಾಟಕ ಸರ್ಕಾರದ (ವ್ಯವಹಾರ) ನಿಯಮಾವಳಿ 1977ರನ್ವಯ ಈ ಮೇಲ್ಕಂಡ ಆದೇಶವನ್ನು ಈ ಕಛೇರಿಯ ಮೊಹರು ಮತ್ತು ನನ್ನ ಸಹಿಯ ಅಡಿಯಲ್ಲಿ ದಿನಾಂಕ: 05–10–2004ರಂದು ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಪದ್ಮಾವತಿ**

ಸರ್ಕಾರದ ಅಧೀನ ಕಾರ್ಯದರ್ಶಿ,

ವಾಣಿಜ್ಯ ಮತ್ತು ಕೈಗಾರಿಕೆ ಇಲಾಖೆ. (ಕೈಗಾರಿಕಾ ಸೇವೆಗಳು)

ಪಿ.ಆರ್. 1131

**ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಸಚಿವಾಲಯ**

**ವಿಷಯ:** ಶ್ರೀ ಶೆಟ್ಟಿ ಗುಂಡಪ್ಪ, ನಿವೃತ್ತ ಮುಖ್ಯ ಇಂಜಿನಿಯರ್, ಶ್ರೀ ಕೆ.ರವೀಂದ್ರ ಪೈ, ಶ್ರೀ ಜಿ.ಎ.ನರಸಿಂಹಮೂರ್ತಿ, ನಿವೃತ್ತ ಕಾರ್ಯಪಾಲಕ ಇಂಜಿನಿಯರ್, ಶ್ರೀ ಎಸ್.ಟಿ. ಖೊಂಬೆ, ಶ್ರೀ ಆರ್.ಧನಿವಿಠಲ್, ಸಹಾಯಕ ಕಾರ್ಯಪಾಲಕ ಇಂಜಿನಿಯರ್, ಅವರುಗಳ ವಿರುದ್ಧ ಇಲಾಖಾ ವಿಚಾರಣೆ- ವಿಚಾರಣಾಧಿಕಾರಿ ಮತ್ತು ಮಂಡನಾಧಿಕಾರಿಯವರನ್ನು ನೇಮಿಸುವ ಬಗ್ಗೆ.

**ಓದಲಾಗಿದೆ:**
1. ನೋಟೀಸ್ ಸಂಖ್ಯೆ:ಸಿಆಸುಇ 27 ಎಸ್‌ಇ ಎನ್ 2002, ದಿನಾಂಕ:29-6-2002.
2. ಶ್ರೀ ಶೆಟ್ಟಿ ಗುಂಡಪ್ಪ ಅವರ ದಿನಾಂಕ: 30-8-2002ರ ಉತ್ತರ.
3. ಶ್ರೀ ಜಿ.ಎ.ನರಸಿಂಹಮೂರ್ತಿ ಅವರ ದಿನಾಂಕ:25-6-2003ರ ಉತ್ತರ.
4. ಶ್ರೀ ಎಸ್.ಟಿ.ಖೊಂಬೆ ಸಹಾಯಕ ಕಾರ್ಯಪಾಲಕ ಇಂಜಿನಿಯರ್ ರವರ ದಿನಾಂಕ:2-12-2002ರ ಉತ್ತರ.
5. ಶ್ರೀ ಆರ್.ಧನಿವಿಠಲ್, ಸಹಾಯಕ ಕಾರ್ಯಪಾಲಕ ಇಂಜಿನಿಯರ್‌ರವರ ದಿನಾಂಕ:9-12-2002ರ ಉತ್ತರ.

**ಪ್ರಸ್ತಾವನೆ:**

ಶ್ರೀ ಶೆಟ್ಟಿಗುಂಡಪ್ಪ, ನಿವೃತ್ತ ಮುಖ್ಯ ಇಂಜಿನಿಯರ್, ಶ್ರೀ ಕೆ.ರವೀಂದ್ರ ಪೈ, ಶ್ರೀ ಜಿ.ಎ.ನರಸಿಂಹಮೂರ್ತಿ, ನಿವೃತ್ತ ಕಾರ್ಯಪಾಲಕ ಇಂಜಿನಿಯರ್ ಶ್ರೀ ಎಸ್.ಟಿ.ಖೊಂಬೆ, ಶ್ರೀ ಆರ್. ಧನಿವಿಠಲ್ ಸಹಾಯಕ ಕಾರ್ಯಪಾಲಕ ಇಂಜಿನಿಯರ್‌ಗಳು ಜಲಸಂಪನ್ಮೂಲ ಸಂಸ್ಥೆ, ಬೆಂಗಳೂರುರವರುಗಳು ದಿನಾಂಕ:28-5-96 ರಿಂದ 22-2-99ರ ವರೆಗೆ ಬೀದರ್ ಜಿಲ್ಲೆಯಲ್ಲಿ ಕೆಲಸ ನಿರ್ವಹಿಸುತ್ತಿದ್ದಾಗ, ವಿಶ್ವಬ್ಯಾಂಕ್ ನೆರವಿನಿಂದ ಜಿಲ್ಲೆಯಲ್ಲಿ ಕೈಗೊಳ್ಳಲಾದ ಸಮಗ್ರ ಗ್ರಾಮೀಣ ನೀರು ಸರಬರಾಜು ಮತ್ತು ಪರಿಸರ ನೈರ್ಮಲ್ಯ ಯೋಜನೆ ಕಾಮಗಾರಿಗಳಿಗೆ ಸಂಬಂಧಿಸಿದಂತೆ ಕಾಮಗಾರಿಗಳು ನಡೆಯದಿದ್ದರೂ ಕಾಮಗಾರಿಗಳು ನಡೆದಿರುವುದಾಗಿ

ಗುತ್ತಿಗೆದಾರರು ಸೃಷ್ಟಿಸಿದ ಸುಳ್ಳು ದಾಖಲೆಗಳನ್ನು ಆಧರಿಸಿ ಸುಮಾರು ರೂ. 46.6 ಲಕ್ಷಗಳನ್ನು ಗುತ್ತಿಗೆದಾರರಿಗೆ ಪಾವತಿಸಿ ಸರ್ಕಾರದ ಹಣವನ್ನು ದುರುಪಯೋಗ ಮಾಡಿರುವ ಆರೋಪಗಳಿಗಾಗಿ ಶ್ರೀ ಶೆಟ್ಟಿಗುಂಡಪ್ಪ, ನಿವೃತ್ತ ಮುಖ್ಯ ಇಂಜಿನಿಯರ್ ಶ್ರೀ ಕೆ. ರವೀಂದ್ರ ಪೈ, ನಿವೃತ್ತ ಕಾರ್ಯಪಾಲಕ ಇಂಜಿನಿಯರ್, ಶ್ರೀ ಜಿ.ಎ.ನರಸಿಂಹಮೂರ್ತಿ, ನಿವೃತ್ತ ಕಾರ್ಯಪಾಲಕ ಇಂಜಿನಿಯರ್, ಶ್ರೀ ಟಿ.ಎಸ್.ಖೊಂಬೆ, ಶ್ರೀ ಆರ್.ಧನಿವಿಠಲ್, ಸಹಾಯಕ ಕಾರ್ಯಪಾಲಕ ಇಂಜಿನಿಯರ್ ಇವರುಗಳಿಗೆ ಮೇಲೆ(1) ರಲ್ಲಿ ಓದಲಾದ ದಿನಾಂಕ: 29-6-2002 ನೋಟೀಸನ್ನು ಜಾರಿ ಮಾಡಿ ಸಮಜಾಯಿಷಿ ಕೇಳುವ ಮೂಲಕ ಅವರ ವಿರುದ್ಧ ಇಲಾಖಾ ವಿಚಾರಣೆಯನ್ನು ಪ್ರಾರಂಭಿಸಲಾಯಿತು. ನೋಟೀಸಿಗೆ ಮೇಲೆ 2,3,4,ಮತ್ತು 5 ರಲ್ಲಿ ಓದಲಾದ ದಿನಾಂಕ: 30-8-2002, 25-6-2003, 2.12.2002, 9-12-2002 ರ ಉತ್ತರ ಸಲ್ಲಿಸಿದ ಆರೋಪಿತ ಅಧಿಕಾರಿಗಳು ತಮ್ಮ ಮೇಲೆ ಹೊರಿಸಲಾದ ದೋಷಾರೋಪಣೆಯನ್ನು ನಿರಾಕರಿಸಿರುತ್ತಾರೆ. ಶ್ರೀ ಕೆ.ಆರ್.ಪೈ ರವರು ಉತ್ತರಿಸಿರುವುದಿಲ್ಲ. ಆದ್ದರಿಂದ ಆರೋಪದಲ್ಲಿನ ಸತ್ಯಾಸತ್ಯತೆಯನ್ನು ವಿಚಾರಣೆ ಮೂಲಕ ತಿಳಿಯುವ ದೃಷ್ಟಿಯಿಂದ ವಿಚಾರಣೆಯನ್ನು ಮುಂದುವರಿಸಲು ಸರ್ಕಾರವು ತೀರ್ಮಾನಿಸಿ ಈ ಮುಂದಿನಂತೆ ಆದೇಶಿಸುತ್ತದೆ.

**ಆದೇಶ ಸಂಖ್ಯೆ:ಸಿಆಸುಇ 27 ಎಸ್ಇ ಎನ್ 2002(1) ಬೆಂಗಳೂರು, ದಿನಾಂಕ: 25ನೇ ಸೆಪ್ಟೆಂಬರ್ 2004.**

ಪ್ರಸ್ತಾವನೆಯಲ್ಲಿ ವಿವರಿಸಲ್ಪಟ್ಟ ಸಂದರ್ಭಗಳಿಂದಾಗಿ ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಾವಳಿ 1957ರ, ನಿಯಮ 13 ರೊಡನೆ ಓದಿಕೊಂಡಂತೆ ನಿಯಮ 11(2) ರಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಹಾಲಿ ಕಾರ್ಯನಿರ್ವಹಿಸುತ್ತಿರುವ ಅಧಿಕಾರಿಗಳಾದ ಶ್ರೀ ಎಸ್.ಟಿ.ಖೊಂಬೆ, ಸಹಾಯಕ ಕಾರ್ಯಪಾಲಕ ಇಂಜಿನಿಯರ್, ಶ್ರೀ ಆರ್.ಧನಿವಿಠಲ್, ಸಹಾಯಕ ಕಾರ್ಯಪಾಲಕ ಇಂಜಿನಿಯರ್‌ರವರುಗಳ ವಿರುದ್ಧ ಹಾಗೂ ಕೆ.ಸಿ.ಎಸ್.(ಸಿ.ಸಿ.ಎ.) ನಿಯಮಾವಳಿ 1957ರ ನಿಯಮ 13 ರೊಡನೆ ಓದಿಕೊಂಡಂತೆ ಕರ್ನಾಟಕ ನಾಗರೀಕ ಸೇವಾ ನಿಯಮ 214ನೇ ನಿಯಮದಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ನಿವೃತ್ತ ಅಧಿಕಾರಿಗಳಾದ ಶ್ರೀ ಶೆಟ್ಟಿಗುಂಡಪ್ಪ, ನಿವೃತ್ತ ಮುಖ್ಯ ಇಂಜಿನಿಯರ್, ಶ್ರೀ ಕೆ.ರವೀಂದ್ರ ಪೈ ನಿವೃತ್ತ ಕಾರ್ಯಪಾಲಕ ಇಂಜಿನಿಯರ್, ಶ್ರೀ ಜಿ.ಎ.ನರಸಿಂಹಮೂರ್ತಿ, ನಿವೃತ್ತ ಕಾರ್ಯಪಾಲಕ ಇಂಜಿನಿಯರ್ ರವರುಗಳ ವಿರುದ್ಧ ಹೇಳಲಾದ ಆರೋಪಗಳ ಕುರಿತು ಜಂಟಿ ವಿಚಾರಣೆ ಮಾಡುವ ಸಲುವಾಗಿ ಸರ್ಕಾರವು ಶ್ರೀ ಕೆ.ಈಶ್ವರ ಭಟ್ ಕುಕ್ಕೆಮನೆ ನಿವೃತ್ತ ಜಿಲ್ಲಾ ಮತ್ತು ಸೆಷನ್ಸ್ ನ್ಯಾಯಾಧೀಶರು, ಇವರನ್ನು ವಿಚಾರಣಾಧಿಕಾರಿಯನ್ನಾಗಿ ಈ ಮೂಲಕ ನೇಮಿಸುತ್ತದೆ. ಈ ವಿಚಾರಣೆಗಾಗಿ ಅವರು ಸರ್ಕಾರಿ ಆದೇಶ ಸಂಖ್ಯೆ:ಸಿಆಸುಇ 03 ಸೇಇವಿ 96 ದಿನಾಂಕ:24-04-1998 ರಂತೆ ರೂ. 5000/- ಗೌರವಧನ ಹಾಗೂ ಸರ್ಕಾರಿ ಆದೇಶ ಸಂಖ್ಯೆ:ಸಿಆಸುಇ 45 ಸೇಇವಿ 2001 ದಿನಾಂಕ:4-3-2002 ರಂತೆ ರೂ.1000/- ವಾಹನ ಭತ್ಯೆಯನ್ನು ಪಡೆಯುತ್ತಾರೆ.

ಶಿಸ್ತು ಪ್ರಾಧಿಕಾರಿಯ ಪರವಾಗಿ ಪ್ರಕರಣವನ್ನು ವಿಚಾರಣಾಧಿಕಾರಿಯವರ ಮುಂದೆ ಮಂಡಿಸಲು ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಾವಳಿ 1957ರ ನಿಯಮ 11(5) ರಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಸರ್ಕಾರವು ಶ್ರೀ ಪ್ರಕಾಶ್ ಕುಮಾರ್ ಸೂಪರಿಂಟೆಂಡಿಂಗ್ ಇಂಜಿನಿಯರ್ ಮುಖ್ಯ ಇಂಜಿನಿಯರ್ ರವರ ಕಛೇರಿ ಗ್ರಾಮೀಣಾಭಿವೃದ್ಧಿ ಇಂಜಿನಿಯರಿಂಗ್ ಇಲಾಖೆ ಆನಂದರಾವ್ ಸರ್ಕಲ್ ಬೆಂಗಳೂರು ಅವರನ್ನು ಮಂಡನಾಧಿಕಾರಿಯನ್ನಾಗಿ ಈ ಮೂಲಕ ನೇಮಿಸುತ್ತದೆ. ಮುಖ್ಯ ಇಂಜಿನಿಯರ್ ಗ್ರಾಮೀಣಾಭಿವೃದ್ಧಿ ಇಂಜಿನಿಯರಿಂಗ್ ಇಲಾಖೆ ಇವರು ವಿಚಾರಣಾಧಿಕಾರಿಗಳಿಗೆ ಸ್ಥಳಾವಕಾಶ, ಶೀಘ್ರಲಿಪಿಗಾರರ ಸೇವೆ ಇತ್ಯಾದಿಗಳನ್ನು ಒದಗಿಸಲು ಕ್ರಮ ಕೈಗೊಳ್ಳುತ್ತಾರೆ. ವಿಚಾರಣೆಯನ್ನು 3 ತಿಂಗಳೊಳಗಾಗಿ ಮುಕ್ತಾಯಗೊಳಿಸಿ ವರದಿ ಸಲ್ಲಿಸುವುದು.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎಚ್.ಆರ್.ನಾಗೇಂದ್ರ,**

ಪಿ.ಆರ್. 1132

ಸರ್ಕಾರದ ಅಧೀನ ಕಾರ್ಯದರ್ಶಿ

ಸಿಬ್ಬಂದಿ ಮತ್ತು ಆಡಳಿತ ಸುಧಾರಣಾ ಇಲಾಖೆ (ಸೇವೆಗಳು-3).

**ವಿಷಯ:** ಶ್ರೀ ಆರ್.ಜೆ.ವಾಲೀಕರ್, ಕೆಎಎಸ್ (ಆಯ್ಕೆ ಶ್ರೇಣಿ) ಅಧಿಕಾರಿ ಹಾಗೂ ಇತರರ ವಿರುದ್ಧ ಜಂಟಿ ಇಲಾಖಾ ವಿಚಾರಣೆ-ವಿಚಾರಣಾಧಿಕಾರಿ ಹಾಗೂ ಮಂಡನಾಧಿಕಾರಿಯನ್ನು ನೇಮಿಸಿ ಆದೇಶ ಹೊರಡಿಸುವ ಬಗ್ಗೆ.

**ಓದಲಾಗಿದೆ:**
1. ಸರ್ಕಾರಿ ಆದೇಶ ಸಂಖ್ಯೆ:ಸಿಆಸುಇ 10 ಎಸ್ಇ ಎನ್ 2002, ದಿನಾಂಕ:24-11-2003.
2. ಜಿಲ್ಲಾಧಿಕಾರಿ ಚಿತ್ರದುರ್ಗ ಇವರ ಪತ್ರ ಸಂಖ್ಯೆ:ಸಿಸಿಎ/ಸಿಆರ್-24/2003-04 ದಿನಾಂಕ:19-2-2004.
3. ಶ್ರೀ ಆರ್.ಕೆ.ಬಾಲಸುಂದರ್ ನಿವೃತ್ತ ನ್ಯಾಯಾಧೀಶರ ಪತ್ರ ದಿನಾಂಕ: 16-8-2004.

**ಪ್ರಸ್ತಾವನೆ:**

ಮೇಲೆ ಉಲ್ಲೇಖ(1) ರಲ್ಲಿ ಓದಲಾದ ಸರ್ಕಾರಿ ಆದೇಶದಲ್ಲಿ ಶ್ರೀ ಆರ್.ಜೆ.ವಾಲೀಕರ್, ಕೆಎಎಸ್ ಮತ್ತು ಇತರರ ವಿರುದ್ಧ ಜಂಟಿ ಇಲಾಖಾ ವಿಚಾರಣೆಯನ್ನು ನಡೆಸಲು ಜಿಲ್ಲಾಧಿಕಾರಿಗಳು ಚಿತ್ರದುರ್ಗ ಇವರನ್ನು ವಿಚಾರಣಾಧಿಕಾರಿಯನ್ನಾಗಿ ನೇಮಿಸಲಾಗಿತ್ತು. ಆದರೆ ಜಿಲ್ಲಾಧಿಕಾರಿಗಳಿಗೆ ಕೆಲಸದ ಒತ್ತಡಗಳ ಕಾರಣಗಳಿಂದ ಈ ಕರ್ತವ್ಯವನ್ನು ನಿರ್ವಹಿಸಲು ಸಾಧ್ಯವಾಗುವುದಿಲ್ಲವೆಂದು ಅವರ ಬದಲಿಗೆ ಬೇರೊಬ್ಬರನ್ನು ವಿಚಾರಣಾಧಿಕಾರಿಯನ್ನಾಗಿ ನೇಮಿಸಲು ಉಲ್ಲೇಖ(2) ರಲ್ಲಿ ಓದಲಾದ ಅವರ ಪತ್ರದಲ್ಲಿ ಮನವಿ ಮಾಡಿರುತ್ತಾರೆ. ಅದರಂತೆ ಉಲ್ಲೇಖ(3) ರಲ್ಲಿ ಓದಲಾದ ಪತ್ರದಲ್ಲಿ ಶ್ರೀ ಆರ್.ಕೆ.ಬಾಲಸುಂದರ್, ನಿವೃತ್ತ ನ್ಯಾಯಾಧೀಶರು ಇವರಿಂದ ವಿಚಾರಣಾಧಿಕಾರಿಯಾಗಿ ಕಾರ್ಯನಿರ್ವಹಿಸಲು ಒಪ್ಪಿಗೆಯನ್ನು ಪಡೆಯಲಾಗಿದೆ. ಆದ್ದರಿಂದ ಸರ್ಕಾರವು ಈ ವಿಷಯವನ್ನು ಪರಿಶೀಲಿಸಿ ಈ ಕೆಳಕಂಡಂತೆ ಆದೇಶಿಸುತ್ತದೆ.

**ಸರ್ಕಾರದ ಆದೇಶ ಸಂಖ್ಯೆ:ಸಿಆಸುಇ 10 ಎಸ್ಇ ಎನ್ 2002 ಬೆಂಗಳೂರು, ದಿನಾಂಕ: 24ನೇ ಸೆಪ್ಟೆಂಬರ್ 2004**

ಪ್ರಸ್ತಾವನೆಯಲ್ಲಿ ವಿವರಿಸಿದ ಪರಿಸ್ಥಿತಿಗಳಲ್ಲಿ ಸರ್ಕಾರದ ಆದೇಶ ದಿನಾಂಕ:24-11-2003 ರಲ್ಲಿ ಶ್ರೀ ಆರ್.ಜೆ.ವಾಲೀಕರ್, ಕೆಎಎಸ್ (ಆಯ್ಕೆ ಶ್ರೇಣಿ) ಮತ್ತು ಇ ತರರ ವಿರುದ್ಧ ಜಂಟಿ ಇ ಲಾಖಾ ವಿಚಾರಣೆ ನಡೆಸಲು, ವಿಚಾರಣಾಧಿಕಾರಿಯಾಗಿ ಜಿಲ್ಲಾಧಿಕಾರಿ, ಚಿತ್ರದುರ್ಗ ರವರನ್ನು ನೇಮಿಸಿದ್ದ ಆದೇಶವನ್ನು ಮಾರ್ಪಡಿಸಿ ಕೆಸಿಎಸ್ (ಸಿಸಿಎ) 1957ರ ನಿಯಮ 13 ರೊಡನೆ ಓದಿಕೊಂಡಂತೆ ಅದೇ ನಿಯಮಾವಳಿಯ 11(2) ರಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಹಾಲಿ ಕಾರ್ಯನಿರ್ವಹಿಸುತ್ತಿರುವ ಅಧಿಕಾರಿ/ನೌಕರರಾದ 1) ಶ್ರೀ ಆರ್.ಜೆ.ವಾಲೀಕರ್,ಕೆಎಎಸ್ (ಆಯ್ಕೆ ಶ್ರೇಣಿ) ಅಧಿಕಾರಿ, 2) ಶ್ರೀ ಕೆ.ಜಿ.ಜಯದೇವಪ್ಪ, ಜಿಲ್ಲಾ ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಅಧಿಕಾರಿ,ಚಿತ್ರದುರ್ಗ, 3) ಶ್ರೀ ಶೈಲೇಂದ್ರ ರೆಡ್ಡಿ, ಪ್ರಥಮ ದರ್ಜೆ ಸಹಾಯಕರು ಇ ವರುಗಳ ವಿರುದ್ಧ ಹಾಗೂ ಕೆ.ಸಿ.ಎಸ್.(ಸಿ.ಸಿ.ಎ.) ನಿಯಮ 13 ರೊಡನೆ ಓದಿಕೊಂಡಂತೆ, ಕೆ.ಸಿ.ಎಸ್.ಆರ್.ನಿಯಮ 214ರಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ನಿವೃತ್ತ ಅಧಿಕಾರಿ/ನೌಕರರಾದ 4) ಶ್ರೀ ಎ.ಎನ್. ಗೋವಿಂದರಾಜ್, ನಿವೃತ್ತ ಕೆಎಎಸ್ ಅಧಿಕಾರಿ 5) ಶ್ರೀ ವಿ.ಪಾಪಣ್ಣ, ನಿವೃತ್ತ ಸಹಾಯಕ ಕಾರ್ಯದರ್ಶಿ, 6) ಶ್ರೀ ಬಿ.ವರದಾಚಾರ್, ನಿವೃತ್ತ ವ್ಯವಸ್ಥಾಪಕರುರವರು ಗಳ ವಿರುದ್ಧ, ಜಂಟಿ ಇ ಲಾಖಾ ವಿಚಾರಣೆಯನ್ನು ನಡೆಸಲು ಸರ್ಕಾರವು ಶ್ರೀ ಆರ್.ಕೆ.ಬಾಲಸುಂದರ್, ನಿವೃತ್ತ ಜಿಲ್ಲಾ ನ್ಯಾಯಾಧೀಶರು ಚಿತ್ರದುರ್ಗ ರವರನ್ನು ವಿಚಾರಣಾಧಿಕಾರಿಯನ್ನಾಗಿ ನೇಮಿಸುತ್ತದೆ. ಈ ವಿಚಾರಣೆಗಾಗಿ ಅವರು ಸರ್ಕಾರಿ ಆದೇಶ ಸಂಖ್ಯೆ:ಸಿಆಸುಇ 03 ಸೇಇ ವಿ 96 ದಿನಾಂಕ:24-4-98 ರಂತೆ ರೂ.5,000/- ಗೌರವಧನ ಹಾಗೂ ಸರ್ಕಾರಿ ಆದೇಶ ಸಂಖ್ಯೆ:ಸಿಆಸುಇ 45 ಸೇಇ ವಿ 2001 ದಿನಾಂಕ:4-3-2002 ರಂತೆ ರೂ.1,000/- ವಾಹನಭತ್ಯೆಯನ್ನು ಪಡೆಯುತ್ತಾರೆ.

ಶಿಸ್ತು ಪ್ರಾಧಿಕಾರದ ಪರವಾಗಿ ದಿನಾಂಕ:24-11-2003 ರ ಆದೇಶದಲ್ಲಿ ಮಂಡನಾಧಿಕಾರಿಯಾಗಿ ನೇಮಿಸಲಾಗಿರುವ ಉಪ ಕಾರ್ಯದರ್ಶಿ(ಆಡಳಿತ) ಜಿಲ್ಲಾ ಪಂಚಾಯತ್, ಚಿತ್ರದುರ್ಗ ಇ ವರೇ ಮಂಡನಾಧಿಕಾರಿಯಾಗಿ ಮುಂದುವರೆಯುತ್ತಾರೆ.

ವಿಚಾರಣಾಧಿಕಾರಿಗಳಿಗೆ ಸ್ಥಳಾವಕಾಶ, ಶೀಘ್ರಲಿಪಿಗಾರರ ಸೇವೆ ಲೇಖನ ಸಾಮಗ್ರಿ ಇ ತ್ಯಾದಿಗಳನ್ನು ಒದಗಿಸಲು ಮುಖ್ಯ ಕಾರ್ಯನಿರ್ವಾಹಣಾಧಿಕಾರಿಗಳು, ಜಿಲ್ಲಾ ಪಂಚಾಯತ್ ಚಿತ್ರದುರ್ಗ ಇ ವರು ಕ್ರಮ ಕೈಗೊಳ್ಳುತ್ತಾರೆ. ವಿಚಾರಣೆಯನ್ನು 3 ತಿಂಗಳೊಳಗಾಗಿ ಮುಕ್ತಾಯಗೊಳಿಸಿ ವರದಿ ಸಲ್ಲಿಸುವುದು.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎಚ್.ಆರ್.ನಾಗೇಂದ್ರ**

ಪಿ.ಆರ್. 1133 ಸರ್ಕಾರದ ಅಧೀನ ಕಾರ್ಯದರ್ಶಿ,

ಸಿಬ್ಬಂದಿ ಮತ್ತು ಆಡಳಿತ ಸುಧಾರಣಾ ಇ ಲಾಖೆ,(ಸೇವೆಗಳು-3).

**ವಿಷಯ:** ಶ್ರೀ ಎಸ್. ಇ ಂದುಧರ ನಿವೃತ್ತ ಜಿಲ್ಲಾ ಮತ್ತು ಸೆಷನ್ಸ್ ನ್ಯಾಯಾಧೀಶರಿಗೆ ವಿಚಾರಣಾ ವರದಿ ಸಲ್ಲಿಸಿದ್ದಕ್ಕಾಗಿ ಗೌರವಧನ ವಾಹನ ಭತ್ಯೆ ಮಂಜೂರು ಮಾಡುವ ಬಗ್ಗೆ.

**ಓದಲಾಗಿದೆ:** 1. ಸರ್ಕಾರದ ಆದೇಶ ಸಂಖ್ಯೆ:ಸಿಆಸುಇ 40 ಎಸ್ಇ ಎನ್ 2003, ದಿನಾಂಕ: 23.12.2003.

2. ಶ್ರೀ ಎಸ್.ಇ ಂದುಧರ ನಿವೃತ್ತ ಜಿಲ್ಲಾ ಮತ್ತು ಸೆಷನ್ಸ್ ನ್ಯಾಯಾಧೀಶರ ವರದಿ ದಿನಾಂಕ: 9.9.2004.

**ಪ್ರಸ್ತಾವನೆ:**

ಶ್ರೀ ಎಸ್.ಸಿದ್ಧಲಿಂಗಮೂರ್ತಿ, ಮುಖ್ಯ ಇ ಂಜಿನಿಯರ್ ರವರು ಸೇವೆಗೆ ಸೇರಿದ ದಿನಾಂಕದಿಂದಲೂ ಇ ದುವರೆವಿಗೂ ಆಸ್ತಿ ಮತ್ತು ಹೊಣೆಗಾರಿಕೆ ಪಟ್ಟಿಗಳನ್ನು ಸಕ್ಷಮ ಪ್ರಾಧಿಕಾರಕ್ಕೆ ಸಲ್ಲಿಸದೆ ಕರ್ನಾಟಕ ನಾಗರೀಕ ಸೇವಾ(ನಡತೆ)ನಿಯಮಾವಳಿ 1966ರ ನಿಯಮ 23(1) ನ್ನು ಉಲ್ಲಂಘಿಸಿದ ಆರೋಪಕ್ಕಾಗಿ ಅವರುಗಳ ವಿರುದ್ಧ ಇ ಲಾಖಾ ವಿಚಾರಣೆ ನಡೆಸುವ ಸಲುವಾಗಿ ಮೇಲೆ(1) ರಲ್ಲಿ ಓದಲಾದ ದಿನಾಂಕ: 23.12.2003 ಸರ್ಕಾರಿ ಆದೇಶದಲ್ಲಿ ಶ್ರೀ ಎಸ್.ಇ ಂದುಧರ ನಿವೃತ್ತ ಜಿಲ್ಲಾ ಮತ್ತು ಸೆಶನ್ಸ್ ನ್ಯಾಯಾಧೀಶರು, ಇ ವರನ್ನು ವಿಚಾರಣಾಧಿಕಾರಿಯನ್ನಾಗಿ ನೇಮಿಸಲಾಗಿತ್ತು. ವಿಚಾರಣೆ ನಡೆಸಿದ ವಿಚಾರಣಾಧಿಕಾರಿಗಳು ಮೇಲೆ(2) ರಲ್ಲಿ ಓದಲಾದ ದಿನಾಂಕ: 9.9.2004 ರ ವಿಚಾರಣಾ ವರದಿಯನ್ನು ಸಲ್ಲಿಸಿರುತ್ತಾರೆ. ಈ ಸಂಬಂಧ ಅವರಿಗೆ ಗೌರವಧನ ಹಾಗೂ ವಾಹನಭತ್ಯೆ ಮಂಜೂರು ಮಾಡಲು ಸರ್ಕಾರವು ಈ ಮುಂದಿನಂತೆ ಆದೇಶಿಸುತ್ತದೆ.

**ಸರ್ಕಾರಿ ಆದೇಶ ಸಂಖ್ಯೆ:ಸಿಆಸುಇ 40 ಎಸ್ಇ ಎನ್ 2003 ಬೆಂಗಳೂರು, ದಿನಾಂಕ: 27ನೇ ಸೆಪ್ಟೆಂಬರ್ 2004.**

ಸರ್ಕಾರವು ಶ್ರೀ ಎಸ್.ಇ ಂದುಧರ ನಿವೃತ್ತ ಜಿಲ್ಲಾ ಮತ್ತು ಸೆಶನ್ಸ್ ನ್ಯಾಯಾಧೀಶರು, ಇ ವರು ವಿಚಾರಣಾ ವರದಿ ಸಲ್ಲಿಸಿದ ಕಾರಣ ಸರ್ಕಾರಿ ಆದೇಶ ಸಂಖ್ಯೆ: ಸಿಆಸುಇ 3 ಸೇಇ ವಿ 96, ದಿನಾಂಕ:24-4-1998 ರನ್ವಯ ರೂ.5,000/- (ಐದು ಸಾವಿರ ರೂಪಾಯಿಗಳು ಮಾತ್ರ) ಗೌರವಧನವನ್ನು ಹಾಗೂ ಸರ್ಕಾರಿ ಆದೇಶ ಸಂಖ್ಯೆ:ಸಿಆಸುಇ 45 ಸೇಇ ವಿ 2001, ದಿನಾಂಕ:4-3-2002 ರನ್ವಯ ರೂ.1,000/- (ಒಂದು ಸಾವಿರ ರೂಪಾಯಿಗಳು ಮಾತ್ರ) ವಾಹನ ಭತ್ಯೆಯನ್ನು ಇ ವರಿಗೆ ಪಾವತಿ ಮಾಡಬೇಕೆಂದು ಈ ಮೂಲಕ ಆದೇಶಿಸುತ್ತದೆ.

ಈ ಬಗೆಗಿನ ವೆಚ್ಚವನ್ನು ಆಯವ್ಯಯದ ಲೆಕ್ಕ ಶೀರ್ಷಿಕೆ "2052 ಸಚಿವಾಲಯ ಸಾಮಾನ್ಯ ಸೇವೆಗಳು-090-ಸಚಿವಾಲಯ-01, ಕರ್ನಾಟಕ ಸರ್ಕಾರದ ಸಚಿವಾಲಯ-014 ಇ ತರೆ ಭತ್ಯೆಗಳು" ರಲ್ಲಿ ಭರಿಸುವುದು.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎಚ್.ಆರ್.ನಾಗೇಂದ್ರ,**

ಪಿ.ಆರ್. 1134 ಸರ್ಕಾರದ ಅಧೀನ ಕಾರ್ಯದರ್ಶಿ,

ಸಿಬ್ಬಂದಿ ಮತ್ತು ಆಡಳಿತ ಸುಧಾರಣಾ ಇ ಲಾಖೆ, (ಸೇವೆಗಳು-3).

**ಲೋಕೋಪಯೋಗಿ ಸಚಿವಾಲಯ**

**ವಿಷಯ:** ಶ್ರೀ ಪ್ರಭಾಕರ್ ಗೊಬ್ಬೂರ್, ಪದವೀಧರ ಇಂಜಿನಿಯರ್ (ಎಂ.ಆರ್ಇ) ಇವರ ಸೇವೆಯನ್ನು ಸಕ್ರಮಗೊಳಿಸುವ ಬಗ್ಗೆ.

**ಸರ್ಕಾರಿ ಆದೇಶ ಸಂಖ್ಯೆ: ಲೋಇ 31 ಪಿಡಬ್ಲ್ಯುಸಿ 2004, ಬೆಂಗಳೂರು ದಿನಾಂಕ: 7ನೇ ಅಕ್ಟೋಬರ್ 2004**

**ಓದಲಾಗಿದೆ:**
1. ಸರ್ಕಾರದ ಆದೇಶ ಸಂಖ್ಯೆ: ಸಿಆಸುಇ:13:ಎಸ್ಎಲ್ಸಿ:94 ದಿನಾಂಕ 29.9.94
2. ಸರ್ಕಾರದ ಆದೇಶ ಸಂಖ್ಯೆ: ಪಿಡಬ್ಲ್ಯುಡಿ 357 ಪಿಡಬ್ಲ್ಯುಸಿ 90 ದಿನಾಂಕಃ 2.12.94
3. ಸರ್ಕಾರದ ಪತ್ರ ಸಂಖ್ಯೆ: ಪಿಡಬ್ಲ್ಯುಡಿ 201 ಪಿಡಬ್ಲ್ಯುಸಿ 95, ದಿನಾಂಕಃ 2.7.94, 1.9.95 ಮತ್ತು 13.9.95.
4. ಸರ್ಕಾರದ ಆದೇಶ ಸಂಖ್ಯೆ: ಪಿಡಬ್ಲುಡಿ 35 ಪಿಡಬ್ಲುಸಿ 2002 ದಿನಾಂಕ: 24.4.2003.
5. ಮುಖ್ಯ ಇಂಜಿನಿಯರ್, ಗ್ರಾಮೀಣಾಭಿವೃದ್ದಿ ಇಂಜಿನಿಯರಿಂಗ್ ಇಲಾಖೆ, ಬೆಂಗಳೂರು ಇವರ ಪತ್ರ ಸಂಖ್ಯೆ: ಮುಇಂ: ಗ್ರಾಇಂಇ: ಸಿ–14ಎ: ಸ ಇಂ :ಮಾವೇಸಿ ಸಕ್ರಮ:2004–05: 2726: ದಿನಾಂಕ 28.7.2004

**ಪ್ರಸ್ತಾವನೆ:**

ಮೇಲೆ ಓದಲಾದ ಕ್ರಮ ಸಂಖ್ಯೆ (1)ರ ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆಯ ಆದೇಶದಲ್ಲಿ ಸರ್ವೋಚ್ಚ ನ್ಯಾಯಾಲಯದ ರಿಟ್ ಅರ್ಜಿ ಸಂಖ್ಯೆ: 737:90, 738:90, 1038:90 ಮತ್ತು 297:91 ರಲ್ಲಿ ನೀಡಿರುವ ಆದೇಶದನ್ವಯ ದಿನಾಂಕ 1.7.84ರ ನಂತರ ಹಾಗೂ 15.10.92ಕ್ಕೆ ಮೊದಲು ದಿನಗೂಲಿಯಲ್ಲಿ ನೇಮಕ ಹೊಂದಿದ ಪದವೀಧರ ಮತ್ತು ಡಿಪ್ಲೋಮಾ ಇಂಜಿನಿಯರ್‌ರನ್ನು ಹಲವು ಷರತ್ತುಗಳಿಗೆ ಒಳಪಟ್ಟಂತೆ ಮಾಸಿಕ ವೇತನ ವ್ಯವಸ್ಥೆಗೆ ಒಳಪಡಿಸಲು ಆದೇಶಿಸಿದೆ.

ಕ್ರಮ ಸಂಖ್ಯೆ: (1) ರಲ್ಲಿ ಓದಲಾದ ಸಿ.ಆ.ಸು.ಇಲಾಖೆಯ ಆದೇಶಾನುಸಾರ ಕ್ರಮ ಸಂಖ್ಯೆ (2)ರ ಆದೇಶದಲ್ಲಿ ಲೋಕೋಪಯೋಗಿ ಮತ್ತು ನೀರಾವರಿ ಇಲಾಖೆಗಳಲ್ಲಿ ದಿನಾಂಕ 1.7.84ರ ನಂತರ 15.10.92ಕ್ಕೆ ಮುಂಚೆ ನೇಮಕ ಹೊಂದಿದ ಪದವೀಧರ ಹಾಗೂ ಡಿಪ್ಲೋಮಾ ಇಂಜಿನಿಯರ್‌ರನ್ನು ದಿನಾಂಕ 29.9.94ರಿಂದ ಜಾರಿಗೆ ಬರುವಂತೆ ಮಾಸಿಕ ವೇತನ ವ್ಯವಸ್ಥೆಗೆ ಒಳಪಡಿಸಿ ಆದೇಶವನ್ನು ಹೊರಡಿಸಲಾಗಿದೆ. ದಿನಾಂಕ 29.9.94ರ ಆದೇಶದಲ್ಲಿನ ಕಂಡಿಕೆ 6 ಮತ್ತು 7 ರಲ್ಲಿ ದಿನಗೂಲಿ ಸೇವೆಯಲ್ಲಿ 10 ವರ್ಷಗಳ ಸತತ ಸೇವೆ ಸಲ್ಲಿಸಿದ ದಿನಗೂಲಿ ಅಭಿಯಂತರರನ್ನು ಕ್ರಮಬದ್ಧಗೊಳಿಸಲು ಸಹ ಆದೇಶಿಸಲಾಗಿದೆ. ಪದವೀಧರ ಇಂಜಿನಿಯರ್‌ರಿಗೆ ಸಂಬಂಧಿಸಿದಂತೆ ಸರ್ಕಾರದ ವತಿಯಿಂದಲೂ ಹಾಗೂ ಡಿಪ್ಲೋಮಾ ಇಂಜಿನಿಯರ್‌ರಿಗೆ ಸಂಬಂಧಿಸಿದಂತೆ ಆಯಾ ಮುಖ್ಯ ಇಂಜಿನಿಯರ್‌ರವರು ಸೂಕ್ತ ಕ್ರಮ ತೆಗೆದುಕೊಳ್ಳುವಂತೆ ನಿರ್ದೇಶಿಸಲಾಗಿದೆ.

ಕ್ರಮ ಸಂಖ್ಯೆ: (3) ರಲ್ಲಿ ಓದಲಾದ ಪತ್ರಗಳಲ್ಲಿ ಹತ್ತು ವರ್ಷಗಳ ಸತತ ಸೇವೆ ಸಲ್ಲಿಸಿದ ದಿನಗೂಲಿ ಅಭಿಯಂತರರನ್ನು ಕ್ರಮಬದ್ಧಗೊಳಿಸುವ ಸಲುವಾಗಿ ಸರ್ಕಾರಕ್ಕೆ ಪ್ರಸ್ತಾವನೆಯನ್ನು ಸಲ್ಲಿಸುವಂತೆ ಲೋಕೋಪಯೋಗಿ ಮತ್ತು ನೀರಾವರಿ ಇಲಾಖೆಗಳ ಎಲ್ಲಾ ಮುಖ್ಯ ಇಂಜಿನಿಯರ್‌ಗಳನ್ನು ಕೋರಲಾಗಿದೆ.

ಅದರಂತೆ ಕ್ರಮ ಸಂಖ್ಯೆ: (5) ರಲ್ಲಿ ಓದಲಾದ ಪತ್ರದಲ್ಲಿ ಮುಖ್ಯ ಇಂಜಿನಿಯರ್, ಗ್ರಾಮೀಣಾಭಿವೃದ್ದಿ ಇಂಜಿನಿಯರಿಂಗ್ ಇಲಾಖೆ, ಬೆಂಗಳೂರು ಇವರಿಂದ ಸ್ವೀಕೃತವಾದ ಪ್ರಸ್ತಾವನೆಯನ್ನು ಪರಿಶೀಲಿಸಿ ಸಿ.ಆ.ಸು.ಇಲಾಖೆಯ ಸಂಖ್ಯೆ: ಡಿಪಿಎಆರ್:13:ಎಸ್ಎಲ್ಸಿ 94 ದಿನಾಂಕ 29.9.94 ಹಾಗೂ ಪಿಡಬ್ಲ್ಯುಡಿ 35 ಪಿಡಬ್ಲ್ಯುಸಿ 2002 ದಿನಾಂಕ 24.4.2003ರ ಆದೇಶದನ್ವಯ ಮಾಸಿಕ ವೇತನದಡಿಯಲ್ಲಿ ಕೆಲಸ ಮಾಡುತ್ತಿರುವ ಪದವೀಧರ ಇಂಜಿನಿಯರ್‌ರನ್ನು ಸಕ್ರಮ ಸೇವೆಯಲ್ಲಿ ವಿಲೀನಗೊಳಿಸಲು ನಿರ್ಧರಿಸಿ ಸರ್ಕಾರವು ಈ ಕೆಳಕಂಡಂತೆ ಆದೇಶಿಸುತ್ತದೆ.

**ಆದೇಶ**

ಪ್ರಸ್ತಾವನೆಯಲ್ಲಿ ವಿವರಿಸಿದ ಕಾರಣಗಳ ಹಿನ್ನೆಲೆಯಲ್ಲಿ ಲೋಕೋಪಯೋಗಿ ಇಲಾಖೆಗಳಲ್ಲಿ ದಿನಾಂಕ 1.7.84ರ ನಂತರ ಹಾಗೂ 15.10.92ಕ್ಕೆ ಮುಂಚೆ ದಿನಗೂಲಿ ಆಧಾರದ ಮೇಲೆ ನೇಮಕಗೊಂಡು ಮಾಸಿಕ ವೇತನ ವ್ಯವಸ್ಥೆಯಡಿಯಲ್ಲಿ ಕೆಲಸ ನಿರ್ವಹಿಸುತ್ತಿರುವ ಹಾಗೂ ಸರ್ಕಾರದ ಆದೇಶ ಸಂಖ್ಯೆ: ಸಿಆಸುಇ:13:ಎಸ್ಎಲ್ಸಿ:94 ದಿನಾಂಕ 29.9.94 ಹಾಗೂ ಪಿಡಬ್ಲ್ಯುಡಿ 35 ಪಿಡಬ್ಲ್ಯುಸಿ 2002 ದಿನಾಂಕ 24.4.2003ರ ಆದೇಶಗಳಲ್ಲಿ ವಿಧಿಸಿರುವ ಷರತ್ತುಗಳನ್ನು ಪೂರೈಸಿದ ಈ ಕೆಳಕಂಡ ಪದವೀಧರ ಇಂಜಿನಿಯರ್‌ರನ್ನು ಅವರ ಮುಂದೆ ಸೂಚಿಸಲಾಗಿರುವ ದಿನಾಂಕದಿಂದ ಸಕ್ರಮ ಸೇವೆಯಲ್ಲಿ ವಿಲೀನಗೊಳಿಸಲಾಗಿದೆ.

| ಕ್ರಮ ಸಂಖ್ಯೆ | ಹೆಸರು | ದಿನಗೂಲಿಗೆ ಸೇರಿದ ದಿನಾಂಕ | 10 ವರ್ಷ ಸೇವೆ ಪೂರೈಸಿದ ದಿನಾಂಕ | ಕ್ರಮಬದ್ಧ ಗೊಂಡದಿನಾಂಕ | ಕಾರ್ಯ ನಿರ್ವಹಿಸುತ್ತಿರುವ ಸ್ಥಳ |
|---|---|---|---|---|---|
| 1. | ಶ್ರೀ ಪ್ರಭಾಕರ್ ಗೊಬ್ಬೂರ್, ಪದವೀಧರ ಇಂಜಿನಿಯರ್ | 1.4.92 | 31.3.2002 | 1.4.2002 | ಗ್ರಾಮೀಣಾಭಿವೃದ್ದಿ ಇಂಜಿನಿಯರಿಂಗ್ ವೃತ್ತ, ಗುಲ್ಬರ್ಗಾ |

ಸದರಿ ನೌಕರರಿಗೆ ಆದೇಶ ಹೊರಡಿಸಿದ ದಿನಾಂಕದಿಂದ ಆರ್ಥಿಕ ಸೌಲಭ್ಯ ಹಾಗೂ ಸೇವಾ ಹಿರಿತನವನ್ನು ನೀಡಲು ಪರಿಗಣಿಸತಕ್ಕದ್ದು.

ಸಕ್ರಮ ಸೇವೆಯಲ್ಲಿ ವಿಲೀನಗೊಂಡ ನಂತರ ಮೇಲ್ಕಂಡ ಸಹಾಯಕ ಇಂಜಿನಿಯರ್‌ರನ್ನು ಮುಖ್ಯ ಇಂಜಿನಿಯರ್, ಗ್ರಾಮೀಣಾಭಿವೃದ್ದಿ ಇಂಜಿನಿಯರಿಂಗ್ ಇಲಾಖೆ, ಬೆಂಗಳೂರು ಇವರ ವಶಕ್ಕೆ ನೀಡಿ ಮುಂದಿನ ಸ್ಥಳ ನಿಯುಕ್ತಿ ಆದೇಶ ನೀಡಲು

ಕ್ರಮ ತೆಗೆದುಕೊಳ್ಳುವಂತೆ ಆದೇಶಿಸಿದೆ. ಇವರು ಮುಖ್ಯ ಇಂಜಿನಿಯರ್, ಗ್ರಾಮೀಣಾಭಿವೃದ್ಧಿ ಇಂಜಿನಿಯರಿಂಗ್ ಇಲಾಖೆ, ಬೆಂಗಳೂರು ಇವರಲ್ಲಿ ಕಾರ್ಯವರದಿ ಮಾಡುವುದು.

ಈ ಆದೇಶವನ್ನು ಸಿಆಸುಇ:13:ಎಸ್‌ಎಲ್‌ಸಿ:94 ದಿನಾಂಕ 29.9.94ರ ಆದೇಶದನ್ವಯ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ

**ಎಸ್. ಚಂದ್ರಶೇಖರಪ್ಪ**

ಪಿ.ಆರ್. 1148 ಸರ್ಕಾರದ ಅಧೀನ ಕಾರ್ಯದರ್ಶಿ

ಲೋಕೋಪಯೋಗಿ ಇಲಾಖೆ(ಸೇವೆಗಳು–ಸಿ)

**ಜಲ ಸಂಪನ್ಮೂಲ ಸಚಿವಾಲಯ**

**ವಿಷಯ:** ಉಡುಪಿ ಜಿಲ್ಲೆ, ಉಡುಪಿ ತಾಲ್ಲೂಕಿನ ಚೆರ್ಕಾಡಿ ಗ್ರಾಮದ ಸರ್ಪಿನಕಟ್ಟೆ ಎಂಬಲ್ಲಿ ಕಿಂಡಿ ಅಣೆಕಟ್ಟು ನಿರ್ಮಾಣದ ಕಾಮಗಾರಿಯ ಟೆಂಡರ್ ಅನುಮೋದನೆ ಬಗ್ಗೆ

**ಓದಲಾಗಿದೆ:**
1. ದಿನಾಂಕ 17/07/2004ರ ಸಣ್ಣ ನೀರಾವರಿ ದಕ್ಷಿಣ ವಲಯ, ಬೆಂಗಳೂರು, ಮುಖ್ಯ ಅಭಿಯಂತರವರ ಪತ್ರ ಸಂಖ್ಯೆ: ಮುಇ ೦/ ಸನೀ (ದ) ಮಂಗಳೂರು/ಸರ್ಪಿನಕಟ್ಟೆ ಕಿಂ.ಅ /2004-05 / 1460
2. ಸರ್ಕಾರದ ಆದೇಶ ಸಂಖ್ಯೆ: ಸನೀಇ 11 ಆಪಿಬಂ 2003 ದಿನಾಂಕ 13/02/2004
3. ಶ್ರೀ ಎಸ್.ಎಂ.ಆನಂದ್, 1ನೇ ದರ್ಜೆ ಗುತ್ತಿಗೆದಾರರು ಇ ವರ ದಿನಾಂಕ 02/09/2004 ಹಾಗೂ 15/09/2004 ರ ಒಪ್ಪಿಗೆ ಪತ್ರ.

***ಪ್ರಸ್ತಾವನೆ:***

ಉಡುಪಿ ಜಿಲ್ಲೆ, ಉಡುಪಿ ತಾಲ್ಲೂಕಿನ ಚೆರ್ಕಾಡಿ ಗ್ರಾಮದ ಸರ್ಪಿನಕಟ್ಟೆ ಎಂಬಲ್ಲಿ ಕಿಂಡಿ ಅಣೆಕಟ್ಟು ನಿರ್ಮಾಣದ ಕಾಮಗಾರಿಯನ್ನು ಕೈಗೊಳ್ಳುವ ಸಲುವಾಗಿ ಸಣ್ಣ ನೀರಾವರಿ ಮಂಗಳೂರು ವಿಭಾಗದಿಂದ ಕರೆಯಲಾದ ಟೆಂಡರನ್ನು ಅಂಗೀಕರಿಸುವ ವಿಷಯದಲ್ಲಿ ಮೇಲೆ (1)ರಲ್ಲಿ ಓದಲಾದ ದಿನಾಂಕ 17/07/2004ರ ಪತ್ರದಲ್ಲಿ ಸಣ್ಣ ನೀರಾವರಿ ದಕ್ಷಿಣ ವಲಯದ ಮುಖ್ಯ ಅಭಿಯಂತರವರು ಸರ್ಕಾರದ ಅನುಮೋದನೆ ಕೋರುತ್ತಾ, ಟೆಂಡರ್ ದಾಖಲೆ ಪತ್ರಗಳನ್ನು ಸಲ್ಲಿಸಿರುತ್ತಾರೆ.

ಸುಮಾರು 204 ಹೆಕ್ಟೇರ್ ಜಮೀನಿಗೆ ಹಿಂಗಾರು ಮತ್ತು ಮುಂಗಾರಿನಲ್ಲಿ ನೀರಾವರಿ ಸೌಲಭ್ಯ ಕಲ್ಪಿಸುವ ಈ ಕಾಮಗಾರಿಯ 75.00 ಲಕ್ಷ ರೂ.ಗಳ ಅಂದಾಜು ಪಟ್ಟಿಗೆ ಮೇಲೆ (2)ರಲ್ಲಿ ಓದಲಾದ ದಿನಾಂಕ 13/02/2004ರ ಸರ್ಕಾರದ ಆದೇಶದಲ್ಲಿ ಆಡಳಿತಾತ್ಮಕ ಅನುಮೋದನೆ ನೀಡಲಾಗಿದೆ. ನಬಾರ್ಡ್ ಸಂಸ್ಥೆಯ ಆರ್.ಐ.ಡಿ.ಎಫ್-VIIIರಡಿ ಸಾಲ ಸೌಲಭ್ಯ ಪಡೆದಿರುವ ಈ ಕಾಮಗಾರಿಯನ್ನು ಕೈಗೊಳ್ಳಲು ಮಂಗಳೂರು ಸಣ್ಣ ನೀರಾವರಿ ವಿಭಾಗದ ಕಾರ್ಯಪಾಲಕ ಅಭಿಯಂತರರು ಕರ್ನಾಟಕ ಸಾರ್ವಜನಿಕರ ಸಂಗ್ರಹಣೆಯಲ್ಲಿ ಪಾರದರ್ಶಕತೆ ಅಧಿನಿಯಮ 1999ರಡಿ ದ್ವಿಲಕೋಟೆ ಪದ್ಧತಿಯಲ್ಲಿ ಟೆಂಡರ್ ಕರೆದಿದ್ದು, ಟೆಂಡರ್ ಪ್ರಕಟಣೆಯನ್ನು ಈ ಕೆಳಕಂಡ ಮಾಧ್ಯಮಗಳಲ್ಲಿ ಪ್ರಕಟಿಸಲಾಗಿದೆ.

| ಕ್ರ.ಸಂ | ಪತ್ರಿಕೆಯ ಹೆಸರು | ದಿನಾಂಕ |
|---|---|---|
| 1 | ಜಿಲ್ಲಾ ಟೆಂಡರ್ ಬುಲೆಟಿನ್ | 17/05/2004 |
| 2 | ಪ್ರಜಾವಾಣಿ ಕನ್ನಡ ದಿನಪತ್ರಿಕೆ | 05/06/2004 |
| 3 | ವಿಜಯ ಕರ್ನಾಟಕ | 05/06/2004 |

ಈ ಟೆಂಡರ್‌ಗಳಿಗೆ ಸ್ಪಂದಿಸಿದ 13 ಜನ ಗುತ್ತಿಗೆದಾರರು ಅರ್ಜಿ ಸಲ್ಲಿಸಿದ್ದು, ಮೂರು ಜನ ಗುತ್ತಿಗೆದಾರರು ಮಾತ್ರ ದ್ವಿಲಕೋಟೆಯಲ್ಲಿ ಭರ್ತಿ ಮಾಡಿದ ಟೆಂಡರ್‌ಗಳನ್ನು ಸಲ್ಲಿಸಿರುತ್ತಾರೆ. ತೆರೆಯಲಾದ ಪೂರ್ವಾರ್ಹತೆ ಟೆಂಡರ್‌ನಲ್ಲಿ (ತಾಂತ್ರಿಕ ಬಿಡ್) ಈ 3 ಜನ ಗುತ್ತಿಗೆದಾರರು ಅರ್ಹತೆ ಹೊಂದಿದ್ದರಿಂದ ಅವರುಗಳು ಸಲ್ಲಿಸಿದ್ದ ಆರ್ಥಿಕ ಟೆಂಡರ್‌ಗಳನ್ನು ದಿನಾಂಕ 01/07/2004 ರಂದು ತೆರೆದಿದ್ದು, 2003-04ನೇ ಸಾಲಿನ ದರಪಟ್ಟಿಯಂತೆ ಟೆಂಡರ್‌ಗೆ ಇ ಡಲಾದ ಮೊತ್ತವಾದ 62,93,233.00 ರೂ.ಗಳಿಗೆ ವಿರುದ್ಧವಾಗಿ ಗುತ್ತಿಗೆದಾರರು ನಮೂದಿಸಿದ್ದ ದರಗಳ ತುಲನಾತ್ಮಕ ಪಟ್ಟಿ ಈ ಕೆಳಕಂಡಂತಿದೆ.

| ಕ್ರ. ಸಂ | ಗುತ್ತಿಗೆದಾರರ ಹೆಸರು | ಗುತ್ತಿಗೆದಾರರು ಸಲ್ಲಿಸಿರುವ ದರಗಳಂತೆ ಟೆಂಡರ್ ಮೊತ್ತ (ರೂ.ಗಳು) | ಚಾಲ್ತಿ ದರಗಳಿಗೆ ಹೋಲಿಸಿದಾಗ ಹೆಚ್ಚು/ಕಡಿಮೆ (ರೂ.ಗಳು) | ಚಾಲ್ತಿ ದರಗಳಿಗೆ ಹೋಲಿಸಿದಾಗ ಪ್ರತಿಶತ ಹೆಚ್ಚು / ಕಡಿಮೆ |
|---|---|---|---|---|
| 1 | ಶ್ರೀ ಬಿ.ಉದಯಕುಮಾರ್ ಶೆಟ್ಟಿ | 75,84,605.00 | 12,91,372.00 | +20.52% ಹೆಚ್ಚು |
| 2 | ಶ್ರೀ ಎಸ್.ಎಂ.ಆನಂದ್ | 72,78,393.00 | 9,85,160.00 | +15.65 %ಹೆಚ್ಚು |
| 3 | ಶ್ರೀ ಎಲ್.ಓ.ಎಫ್. ಕನ್‌ಸ್ಟ್ರಕ್ಷನ್ | 81,44,132.00 | 18,50,899.00 | +29.41 %ಹೆಚ್ಚು |

ಮೇಲ್ಕಂಡ ತುಲನಾತ್ಮಕ ಪಟ್ಟಿಯ ಅನುಸಾರ ಟೆಂಡರ್‌ಗೆ ಇ ಟ್ಟ ಮೊತ್ತದ ಮೇಲೆ ಶೇಕಡ 15.65 ರಷ್ಟು ಅತೀ ಕಡಿಮೆ ಹೆಚ್ಚುವರಿ ದರಗಳನ್ನು ಸೂಚಿಸಿರುವ 1ನೇ ದರ್ಜೆ ಗುತ್ತಿಗೆದಾರರಾದ ಶ್ರೀ ಎಸ್.ಎಂ.ಆನಂದ್ ಇ ವರು ಟೆಂಡರ್‌ನಲ್ಲಿ ಸೂಚಿಸಿರುವ ದರಗಳು ಹೆಚ್ಚಾಗಿ ಕಂಡುಬಂದ ಕಾರಣ ಟೆಂಡರ್ ದರಗಳನ್ನು ಕಡಿಮೆಗೊಳಿಸಲು ಗುತ್ತಿಗೆದಾರರನ್ನು ದಿನಾಂಕ 11/08/2004 ರಂದು ಸಂಧಾನಕ್ಕೆ ಕರೆಯಲಾಯಿತು.

ಸಭೆಯಲ್ಲಿ 2003-04ನೇ ಸಾಲಿನ ದರಪಟ್ಟಿಯಂತೆ ದರಗಳನ್ನು ತಯಾರಿಸಿದ್ದ ಕಾರಣ ದರಪಟ್ಟಿಯ ದರಗಳಲ್ಲಿಯೇ ಕಾಮಗಾರಿಯನ್ನು ನಿರ್ವಹಿಸಲು ಗುತ್ತಿಗೆದಾರರಿಗೆ ಸೂಚಿಸಲಾಯಿತು. ಗುತ್ತಿಗೆದಾರರು ಸಮಾಲೋಚಿಸಿ, ದಿನಾಂಕ 13/08/2004ರ ಪತ್ರದಲ್ಲಿ ಕೆಳಕಂಡ ಕಾರಣಗಳಿಂದಾಗಿ ದರಗಳನ್ನು ಕಡಿಮೆಗೊಳಿಸಲು ಕಷ್ಟವಾಗುವುದಾಗಿ ತಿಳಿಸಿ ಅವರು ಸೂಚಿಸಿರುವ ದರಗಳಲ್ಲಿ ಶೇಕಡ 1ರಷ್ಟು ರಿಯಾಯಿತಿಯನ್ನು ನೀಡಲು ಒಪ್ಪಿಗೆಯನ್ನು ನೀಡಿರುತ್ತಾರೆ.

1) ಟೆಂಡರ್ ದರಗಳನ್ನು ನಮೂದಿಸುವಾಗ ಪ್ರತಿ ಚೀಲ ಸಿಮೆಂಟ್‌ಗೆ 170.00ರೂ.ಗಳಾಗಿದ್ದು, ಪ್ರಸ್ತುತ ಹಂತದಲ್ಲಿ ಪ್ರತಿ ಚೀಲ ಸಿಮೆಂಟ್ 190.00ರೂ.ಗಳಾಗಿದೆಯೆಂದು ತಿಳಿಸಿರುತ್ತಾರೆ.
2) ಬ್ಯಾರೇಜಿನಲ್ಲಿ ಅಳವಡಿಸಿದ ಕಿರಾಲಬೋಗಿ ಹಲಗೆಗೆ ದರಪಟ್ಟಿಯ ದರಗಳಿಗಿಂತ ಸುಮಾರು 10,000 ರೂ.ಗಳು ಪ್ರತಿ ಘನ ಮೀಟರ್‌ಗೆ ಹೆಚ್ಚಾಗಿರುವುದಾಗಿ ತಿಳಿಸಿರುತ್ತಾರೆ.
3) ಕಾಮಗಾರಿಯ ಸ್ಥಳಕ್ಕೆ ಸರಿಯಾದ ಸಂಪರ್ಕವಿರದ ಕಾರಣ ಬಹಳ ದೂರದಿಂದ ನಿರ್ಮಾಣ ಸಾಮಗ್ರಿಗಳನ್ನು ತರಬೇಕೆಂದು ಹಾಗೂ ನುರಿತ ಕೆಲಸಗಾರರನ್ನು ಬಹಳ ದೂರದಿಂದ ಕಾಮಗಾರಿಯ ಸ್ಥಳಕ್ಕೆ ಕರೆಸಬೇಕಾಗುತ್ತದೆ.
4) ಇ ತ್ತೀಚೆಗೆ ಡೀಸಲ್ ಬೆಲೆಯನ್ನು ಹೆಚ್ಚಿಸಿರುವ ಕಾರಣ.

ಗುತ್ತಿಗೆದಾರರು ದಿನಾಂಕ 13.08.2004ರ ಪತ್ರದಲ್ಲಿ ತಿಳಿಸಿರುವ ಅಂಶಗಳನ್ನು ಕೂಲಂಕಷವಾಗಿ ಪರಿಶೀಲಿಸಿ ಈಗ ಸೂಚಿಸಿರುವ ಶೇಕಡ 1ರಷ್ಟು ರಿಯಾಯಿತಿಯನ್ನು ಒಪ್ಪಲು ಸಾಧುವಾಗುವುದಿಲ್ಲವೆಂದು ತೀರ್ಮಾನಿಸಲಾಯಿತು. ಮುಂದುವರೆದಂತೆ, ಅಂದಾಜಿನಲ್ಲಿ ಸಿಮೆಂಟ್ ಮೂಲದ ಕಾಂಕ್ರೀಟ್‌ನ ಅಂಶ ಅಂದಾಜು ಮೊತ್ತದ ಶೇಕಡ 70ರಷ್ಟು, ಉಕ್ಕಿನ ಅಂಶ ಶೇಕಡ 3ರಷ್ಟು ಹಾಗೂ ಕಿರಾಲಬೋಗಿ ಹಲಗೆಗಳ ಪರಿಮಾಣವು ಶೇಕಡ 13ರಷ್ಟು ಆಗಿದ್ದು, ಸಿಮೆಂಟ್ ದರವು ಟೆಂಡರ್‌ನಲ್ಲಿ ಅಳವಡಿಸಿರುವ ದರಗಳಿಗಿಂತ ಶೇಕಡ 30ರಷ್ಟು ಹೆಚ್ಚಾಗಿದ್ದು, ಉಕ್ಕಿನ ಬೆಲೆಯು ಟೆಂಡರ್ ಮೊತ್ತಕ್ಕಿಂತ ಶೇಕಡ 40 ರಷ್ಟು ಹೆಚ್ಚಾಗಿದೆ ಹಾಗೂ ಕಿರಾಲಬೋಗಿ ಹಲಗೆಗಳ ಬೆಲೆಯು ಸುಮಾರು ಶೇಕಡ 70ರಷ್ಟು ಹೆಚ್ಚಾಗಿರುವ ಕಾರಣ ಹಾಗೂ ಡೀಸೆಲ್ ಬೆಲೆ ಏರಿಕೆಯ ಅಂಶಗಳನ್ನೂ ಸಹಾ ಪರಿಗಣಿಸಿ ಟೆಂಡರ್‌ಗೆ ಇ ಡಲಾದ ಮೊತ್ತದ ಮೇಲೆ ಶೇಕಡ 7ರಷ್ಟು ದರಗಳನ್ನು ನೀಡುವುದು ಸಮಂಜಸವೆಂದು ಸಭೆಯಲ್ಲಿ ತೀರ್ಮಾನಿಸಲಾಯಿತು. ಅದರಂತೆಯೇ ಗುತ್ತಿಗೆದಾರರಿಗೆ ಒಪ್ಪಿಗೆ ಪತ್ರವನ್ನು ನೀಡುವಂತೆಯೂ ಸಹಾ ಕೋರಲಾಯಿತು.

ಗುತ್ತಿಗೆದಾರರು 02/09/2004ರ ಪತ್ರದಲ್ಲಿ ಶೇಕಡ 7 ರಷ್ಟು ಹೆಚ್ಚಿನ ದರಗಳಲ್ಲಿ ಕಾಮಗಾರಿಯನ್ನು ನಿರ್ವಹಿಸಿದಲ್ಲಿ ಅವರಿಗೆ ಹೆಚ್ಚಿನ ನಷ್ಟ ಉಂಟಾಗುವುದಾಗಿ ತಿಳಿಸಿ ಶೇಕಡ 12 ರಷ್ಟು ದರಗಳನ್ನು ನೀಡುವಂತೆ ಕೋರಿರುತ್ತಾರೆ ಹಾಗೂ ಸರ್ಕಾರಕ್ಕೆ ಹಲವಾರು ಬಾರಿ ಮನವಿ ಮಾಡಿಕೊಂಡಿರುತ್ತಾರೆ. ಗುತ್ತಿಗೆದಾರರ ಮನವಿಯನ್ನು ಪರಿಶೀಲಿಸಲು ಮತ್ತೊಮ್ಮೆ ದಿನಾಂಕ 14/09/2004 ರಂದು ಸಭೆ ಕರೆಯಲಾಯಿತು.

ಸಭೆಯಲ್ಲಿ ಗುತ್ತಿಗೆದಾರರ ಪ್ರತಿನಿಧಿಗಳು, ಸಿಮೆಂಟ್ ದರಗಳಲ್ಲಿ, ಉಕ್ಕಿನ ದರಗಳಲ್ಲಿ ಹಾಗೂ ಕಿರಾಲಬೋಗಿ ಹಲಗೆಗಳ ದರಗಳು ಹೆಚ್ಚಾಗಿರುವ ಮತ್ತು ಡೀಸೆಲ್ ಬೆಲೆ ಬಹಳ ಹೆಚ್ಚಾಗುತ್ತಿದ್ದು ಕಾಮಗಾರಿಯನ್ನು ನಿರ್ವಹಿಸುವಲ್ಲಿ ಬಳಸುವ ಎಲ್ಲಾ ಯಂತ್ರೋಪಕರಣಗಳಿಗೆ ಡೀಸೆಲ್ ಬಳಸುವ ಕಾರಣ ಶೇಕಡ 7ರಷ್ಟು ದರಗಳಲ್ಲಿ ಕಾಮಗಾರಿಯನ್ನು ನಿರ್ವಹಿಸುವುದು ಕಷ್ಟಸಾಧ್ಯ ವಾಗುವುದಾಗಿ ತಿಳಿಸಿ, ಹೆಚ್ಚಿನ ದರವನ್ನು ನೀಡುವಂತೆ ಕೋರಿದರು.

ಗುತ್ತಿಗೆದಾರರ ಮನವಿಯನ್ನು ಕೂಲಂಕಷವಾಗಿ ಪರಿಶೀಲಿಸಲಾಯಿತು. ಉಕ್ಕು ಸಿಮೆಂಟ್ ಹಾಗೂ ಡೀಸೆಲ್ ದರಗಳ ಏರಿಕೆಯ ಅಂಶಗಳನ್ನು ಸಹಾ ಪರಿಗಣಿಸಲಾಯಿತು. ಮೇಲೆ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ ಚೆರ್ಕಾಡಿ ಗ್ರಾಮದ ಹತ್ತಿರ ಸರ್ಪಿನಕಟ್ಟೆ ಏಬಲ್ಲಿ ಕಿಂಡಿ ಅಣೆಕಟ್ಟು ನಿರ್ಮಾಣ ಕಾಮಗಾರಿಯನ್ನು 1ನೇ ದರ್ಜೆ ಗುತ್ತಿಗೆದಾರರಾದ ಶ್ರಿ ಎಸ್.ಎಂ.ಆನಂದ್ ಇ ವರಿಗೆ 2003-04ನೇ ಸಾಲಿನ ದರಪಟ್ಟಿಯಂತೆ ಟೆಂಡರಿಗಿಡಲಾದ ಮೊತ್ತವಾದ 62,93,233.00 ರೂ.ಗಳ ಮೇಲೆ ಶೇಕಡ 10ರಷ್ಟು ಹೆಚ್ಚಿನ ದರಗಳಲ್ಲಿ ಅಂದರೆ 69,22,556.00 ರೂ.ಗಳಿಗೆ ಕಾಮಗಾರಿಯನ್ನು ವಹಿಸಲು ಸಭೆಯಲ್ಲಿ ತೀರ್ಮಾನಿಸಲಾಯಿತು. ಇ ದರಿಂದ ಗುತ್ತಿಗೆದಾರರು ಮೊದಲು ಸೂಚಿಸಿದ ದರಗಳನ್ನು ಕಡಿಮೆಗೊಳಿಸಿದ ಕಾರಣ 03,55,837.00 ರೂ.ಗಳು ಉಳಿತಾಯವಾಗುತ್ತದೆ.

ಮೇಲ್ಕಂಡ ಎಲ್ಲಾ ಅಂಶಗಳನ್ನು ಪರಿಗಣಿಸಿ ಸರ್ಕಾರವು ಈ ಕೆಳಕಂಡಂತೆ ಆದೇಶವನ್ನು ಹೊರಡಿಸಿದೆ.

**ಸರ್ಕಾರದ ಆದೇಶ ಸಂಖ್ಯೆ : ಸನೀಇ 84 ಅಪಿಬಂ 2004, ಬೆಂಗಳೂರು, ದಿನಾಂಕ 27ನೇ ಸೆಪ್ಟೆಂಬರ್ 2004**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ ಉಡುಪಿ ಜಿಲ್ಲೆ, ಉಡುಪಿ ತಾಲ್ಲೂಕಿನ ಚೆರ್ಕಾಡಿ ಗ್ರಾಮದ ಸರ್ಪಿನಕಟ್ಟೆ ಏಬಲ್ಲಿ ಕಿಂಡಿ ಅಣೆಕಟ್ಟು ನಿರ್ಮಾಣದ ಕಾಮಗಾರಿಗೆ 2003-04ನೇ ಸಾಲಿನ ದರಪಟ್ಟಿಯಂತೆ ಟೆಂಡರ್‌ಗೆ ಇ ಡಲಾದ ಮೊತ್ತವಾದ 62,93,232.00 ರೂ.ಗಳ ಮೇಲೆ ಸಂಧಾನದ ನಂತರ ಶೇಕಡ 10ರಷ್ಟು ಹೆಚ್ಚಿನ ದರಗಳಲ್ಲಿ ಕಾಮಗಾರಿಯನ್ನು ನಿರ್ವಹಿಸಲು ಒಪ್ಪಿರುವ ಶ್ರೀ ಎಸ್.ಎಂ.ಆನಂದ್, 1ನೇ ದರ್ಜೆ ಗುತ್ತಿಗೆದಾರರಿಗೆ 69,22,556.00 ರೂ.ಗಳಿಗೆ (ಅರವತ್ತೊಂಭತ್ತು ಲಕ್ಷದ ಇ ಪ್ಪತ್ತೆರಡು ಸಾವಿರದ ಐದುನೂರ ಐವತ್ತಾರು ರೂಪಾಯಿಗಳು ಮಾತ್ರ) ಕಾಮಗಾರಿಯನ್ನು ಈ ಕೆಳಕಂಡ ಷರತ್ತುಗಳೊಂದಿಗೆ ವಹಿಸಲು ಸರ್ಕಾರವು ಅನುಮೋದನೆ ನೀಡಿದೆ.

1. ಟೆಂಡರ್‌ನಲ್ಲಿ ನಮೂದಿಸಿರುವ ಕಾಲಮಿತಿಯೊಳಗೆ ಕಾಮಗಾರಿಯನ್ನು ಪೂರ್ಣಗೊಳಿಸುವುದು.
2. ಅಂಗೀಕರಿಸಿದ ಮೇಲ್ಕಂಡ ಮೊತ್ತಕ್ಕಿಂತ ಹೆಚ್ಚುವರಿಯಾಗಿ ಯಾವುದೇ ಕ್ಲೇಮುಗಳನ್ನು ಸರ್ಕಾರ ಪರಿಗಣಿಸುವುದಿಲ್ಲ.
3. ಕಾರ್ಯಪಾಲಕ ಅಭಿಯಂತರರು ಗುತ್ತಿಗೆದಾರರೊಂದಿಗೆ ಕರಾರು ಮಾಡಿಕೊಳ್ಳುವ ಸಮಯದಲ್ಲಿ ಈಗಿನ ಒಪ್ಪಿದ ಟೆಂಡರ್ ಮೊತ್ತಕ್ಕಿಂತ ಹೆಚ್ಚುವರಿಯಾಗಿ ಗುತ್ತಿಗೆದಾರರ ಯಾವುದೇ ಕ್ಲೇಮುಗಳನ್ನು ಪರಿಗಣಿಸುವುದಿಲ್ಲವೆಂದು ಕರಾರಿನಲ್ಲಿ ನಮೂದಿಸತಕ್ಕದ್ದು.
4. ಟೆಂಡರ್‌ನಲ್ಲಿ ಸೂಚಿಸಿರುವ ಎಲ್ಲಾ ಷರತ್ತುಗಳನ್ನು ಪಾಲಿಸತಕ್ಕದ್ದು.

ಈ ಆದೇಶವನ್ನು ಆರ್ಥಿಕ ಇ ಲಾಖೆಯ ಆದೇಶ ಸಂಖ್ಯೆ: ಎಫ್‌ಡಿ 1 ಟಿಎಫ್‌ಪಿ 2002, ದಿನಾಂಕ 20/01/2003ರಲ್ಲಿ ಇ ಲಾಖಾ ಕಾರ್ಯದರ್ಶಿಯವರಿಗೆ ನೀಡಿರುವ ಆರ್ಥಿಕಾಧಿಕಾರದನ್ವಯ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎಂ.ಎನ್.ಮಂಜುನಾಥ್**

1109

ಸರ್ಕಾರದ ಅಧೀನ ಕಾರ್ಯದರ್ಶಿ

ಜಲ ಸಂಪನ್ಮೂಲ ಇ ಲಾಖೆ (ಸಣ್ಣ ನೀರಾವರಿ)

**ಶಿಕ್ಷಣ ಸಚಿವಾಲಯ**

**ವಿಷಯ:** ಶ್ರೀ ಸುಂದರ್ ಕೊರಳಿಕರ್, ನಿವೃತ್ತ ಜಿಲ್ಲಾ ದೈಹಿಕ ಶಿಕ್ಷಣ ಅಧೀಕ್ಷಕರು, ಉಪನಿರ್ದೇಶಕರ ಕಚೇರಿ, ಸಾರ್ವಜನಿಕ ಶಿಕ್ಷಣ ಇಲಾಖೆ, ಗುಲ್ಬರ್ಗಾ, ಇವರ ಮೇಲಿನ ಆರೋಪಗಳಿಗೆ ವಿಚಾರಣೆ ನಡೆಸಲು ವಿಚಾರಣಾಧಿಕಾರಿ ಹಾಗೂ ಮಂಡನಾಧಿಕಾರಿ ನೇಮಕ ಮಾಡುವ ಬಗ್ಗೆ.

**ಓದಲಾಗಿದೆ:** 1) ಅಧಿಕೃತ ಜ್ಞಾಪನಾ ಸಂ:ಇಡಿ 44 ಡಿಜಿಡಿ 2002 (ಭಾಗ) ದಿ:15.6.2004

2) ಶ್ರೀ ಸುಂದರ್ ಕೊರಳಿಕರ್ ಇವರ ಪ್ರತಿ ರಕ್ಷಣಾ ಹೇಳಿಕೆ ದಿ:24.8.2004

**ಪ್ರಸ್ತಾವನೆ:**

ಶ್ರೀ ಸುಂದರ್ ಕೊರಳಿಕರ್ ನಿವೃತ್ತ ಜಿಲ್ಲಾ ದೈಹಿಕ ಅಧೀಕ್ಷಕರು, ಉಪನಿರ್ದೇಶಕರ ಕಚೇರಿ, ಗುಲ್ಬರ್ಗ, ಇವರು ಸೇವೆಯಿಂದ 31.12.2000 ರಂದು ನಿವೃತ್ತಿ ಹೊಂದಿದ್ದು, ನಿವೃತ್ತಿ ಹೊಂದುವ ಮೊದಲು ದೈಹಿಕ ಶಿಕ್ಷಣ ವಿಭಾಗದಲ್ಲಿ ಕಾರ್ಯನಿರ್ವಹಿಸುತ್ತಿದ್ದಾಗ ಕ್ರೀಡಾ ತರಬೇತಿ ಹಾಗೂ ಇತರೆ ಕಾರ್ಯಕ್ರಮಗಳಿಗೆ ಸಂಬಂಧಪಟ್ಟಂತೆ ಇದ್ದ ಹಣಕಾಸಿನ ವೆಚ್ಚಗಳ ದಾಖಲಾತಿಗಳು:ಲೆಕ್ಕಪತ್ರಗಳನ್ನು ತದನಂತರ ಬಂದ ಉತ್ತರಾಧಿಕಾರಿಯವರಿಗಾಗಲೀ ಅಥವಾ ಗುಲ್ಬರ್ಗಾ ಜಿಲ್ಲಾ ಸಾರ್ವಜನಿಕ ಶಿಕ್ಷಣ ಇಲಾಖಾ ಉಪ ನಿರ್ದೇಶಕರಿಗಾಗಲೀ ಹಸ್ತಾಂತರಿಸದೆ ಕ್ರೀಡಾ ಕ್ರಮಗಳಿಗೆ ಬಿಡುಗಡೆಗೊಳಿಸಲಾಗಿದ್ದ ಹಣವನ್ನು ದುರುಪಯೋಗಪಡಿಸಿಕೊಳ್ಳಲು ಕಾರಣರಾಗಿರುವುದು ದಾಖಲೆಗಳಿಂದ ಮೇಲ್ನೋಟಕ್ಕೆ ನಿಜವೆಂದು ಕಂಡುಬಂದ ಹಿನ್ನಲೆಯಲ್ಲಿ ಮೇಲೆ ಓದಲಾದ ಕ್ರಮಾಂಕ (1) ರ ದಿ:15.6.2004 ರ ಅಧಿಕೃತ ಜ್ಞಾಪನದ ಮೂಲಕ ಕಾರಣ ಕೇಳುವ ನೋಟೀಸನ್ನು ಜಾರಿಗೊಳಿಸಲಾಗಿತ್ತು. ಶ್ರೀ ಸುಂದರ್ ಕೊರಳಿಕರ್ ಇವರು ದಿನಾಂಕ:24.8.2004 ರಂದು ಪ್ರತಿರಕ್ಷಣಾ ಹೇಳಿಕೆ ಸಲ್ಲಿಸಿ, ಅವರ ಮೇಲಿನ ಆರೋಪಗಳನ್ನು ಅಲ್ಲಗಳೆದಿದ್ದಾರೆ.

ಶ್ರೀ ಸುಂದರ್ ಕೊರಳಿಕರ್ ಇವರು ನೋಟೀಸಿಗೆ ನೀಡಿದ್ದ ಪ್ರತಿರಕ್ಷಣಾ ಹೇಳಿಕೆ ಹಾಗೂ ದಾಖಲೆಗಳನ್ನು ಪರಿಶೀಲಿಸಿದ ನಂತರ ಸದರಿಯವರು ಕ್ರೀಡಾ ತರಬೇತಿ ಹಾಗೂ ಇತರೆ ಕಾರ್ಯಕ್ರಮಗಳಿಗೆ ಸಂಬಂಧಿಸಿದಂತೆ ಹಣಕಾಸಿನ ಖರ್ಚು ವೆಚ್ಚಕ್ಕೆ ಸಂಬಂಧಿಸಿದಂತೆ ಮೂಲ ದಾಖಲೆಗಳನ್ನು ಮೇಲಾಧಿಕಾರಿಯವರಿಗೆ ಹಸ್ತಾಂತರಿಸದೆ ಇರುವುದು ಕಂಡುಬಂದಿದ್ದರಿಂದ ಪ್ರಕರಣದ ಬಗ್ಗೆ ಪೂರ್ಣ ಪ್ರಮಾಣದ ವಿಚಾರಣೆ ನಡೆಸುವುದು ಸೂಕ್ತವೆಂದು ಸರ್ಕಾರವು ನಿರ್ಧರಿಸಿ, ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರಿ ಆದೇಶ ಸಂಖ್ಯೆ:ಇಡಿ 44 ಡಿಜಿಡಿ 2002(ಭಾಗ) ಬೆಂಗಳೂರು, ದಿನಾಂಕ: 7ನೇ ಅಕ್ಟೋಬರ್ 2004**

ಪ್ರಸ್ತಾವನೆಯಲ್ಲಿ ವಿವರಿಸಲಾದ ಕಾರಣಗಳ ಹಿನ್ನಲೆಯಲ್ಲಿ ಶ್ರೀ ಸುಂದರ್ ಕೊರಳಿಕರ್ ನಿವೃತ್ತ ಜಿಲ್ಲಾ ದೈಹಿಕ ಅಧೀಕ್ಷಕರು, ಉಪನಿರ್ದೇಶಕರ ಕಚೇರಿ, ಗುಲ್ಬರ್ಗ, ಇವರ ಮೇಲಿನ ಆರೋಪಗಳಿಗೆ ವಿಚಾರಣೆ ನಡೆಸಲು ಕೆಸಿಎಸ್ (ಸಿಸಿಎ) ನಿಯಮಾವಳಿಗಳು 1957 ರ ನಿಯಮ 11(2)ರ ಮೇರೆಗೆ ಶ್ರೀ ರೇಗಿಸ್ ಫಿಲೋಮಿನಾ ರಾಜ್, ರೀಡರ್, ಸರ್ಕಾರಿ ಶಿಕ್ಷಕರ ಶಿಕ್ಷಣ ಮಹಾವಿದ್ಯಾಲಯ, ಗುಲ್ಬರ್ಗಾ, ಇವರನ್ನು ವಿಚಾರಣಾಧಿಕಾರಿಯಾಗಿಯೂ ಹಾಗೂ ಅದೇ ನಿಯಮಾವಳಿಗಳ ನಿಯಮ 11(5)(ಸಿ) ಮೇರೆಗೆ ಶ್ರೀಮತಿ ನಿರ್ಮಲಾ ಬೆಳಕೇರಿ, ಉಪನ್ಯಾಸಕರು, ಸರ್ಕಾರಿ ಶಿಕ್ಷಕರ ಶಿಕ್ಷಣ ಮಹಾವಿದ್ಯಾಲಯ, ಗುಲ್ಬರ್ಗಾ, ಇವರನ್ನು ಮಂಡನಾಧಿಕಾರಿಯಾಗಿ ನೇಮಕ ಮಾಡಿ ಆದೇಶಿಸಿದೆ.

ವಿಚಾರಣಾಧಿಕಾರಿಗಳು ಆಪಾದಿತರ ಮೇಲಿನ ಪ್ರತಿಯೊಂದು ಆರೋಪಗಳನ್ನು ವಿಚಾರಣೆಗೊಳಪಡಿಸಿ ಸಿಸಿಎ ನಿಯಮ 11 ರಲ್ಲಿ ತಿಳಿಸಿರುವ ಎಲ್ಲಾ ವಿಧಿ–ವಿಧಾನಗಳನ್ನು ಅನುಸರಿಸಿ, ಆರೋಪಗಳು ಸಾಬೀತಾಗಿದ್ದರೆ ಯಾವ ದಾಖಲೆಗಳ ಆಧಾರದ ಮೇಲೆ ಸಾಬೀತಾಗದೆ ಇದ್ದರೆ ಯಾವ ದಾಖಲೆಗಳ ಆಧಾರದ ಮೇಲೆ ಎಂಬುದನ್ನು ವಿಚಾರಣಾ ವರದಿಯಲ್ಲಿ ನಿರ್ದಿಷ್ಟವಾಗಿ ದಾಖಲಿಸಿ, ಅನುಬಂಧ–3 ರಲ್ಲಿ ನಮೂದಿಸಲಾದ ಎಲ್ಲಾ ಮೂಲ ದಾಖಲೆಗಳೊಂದಿಗೆ ವಿಚಾರಣಾ ವರದಿಯನ್ನು ಈ ಆದೇಶ ಹೊರಡಿಸಿದ ದಿನಾಂಕದಿಂದ 2 ತಿಂಗಳೊಳಗಾಗಿ ತಪ್ಪದೆ ಶಿಸ್ತು ಪ್ರಾಧಿಕಾರಿಯಾದ ಸರ್ಕಾರಕ್ಕೆ ಒಪ್ಪಿಸುವಂತೆ ಆದೇಶಿಸಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ

**ಎಫ್.ಆರ್.ಸಂಬರಗಿ**

ಪಿ.ಆರ್. 1140

ಸರ್ಕಾರದ ಅಧೀನ ಕಾರ್ಯದರ್ಶಿ,

ಶಿಕ್ಷಣ ಇಲಾಖೆ.(ಸೇ–1,2)

**ವಿಷಯ:** ಶ್ರೀ ಎಂ.ಎಸ್.ಪಾಟೀಲ್, ಉಪನಿರ್ದೇಶಕರು, ಸಾರ್ವಜನಿಕ ಶಿಕ್ಷಣ ಇಲಾಖೆ, ಚಿಕ್ಕೋಡಿ, ಬೆಳಗಾಂ ಜಿಲ್ಲೆ, ಇವರು ನಿಶ್ಚಿತ ವರಮಾನಕ್ಕಿಂತಲೂ ಹೆಚ್ಚು ಪ್ರಮಾಣದಲ್ಲಿ ಚರಾಸ್ತಿ ಮತ್ತು ಸ್ಥಿರಾಸ್ತಿ ಹೊಂದಿದ್ದಾರೆಂಬ ಆರೋಪಗಳಿಗೆ ವಿಚಾರಣೆ ನಡೆಸಲು ಕೆಸಿಎಸ್ (ಸಿಸಿಎ) ನಿಯಮಾವಳಿಗಳು 1957 ರ ನಿಯಮ 14–ಎ ಮೇರೆಗೆ ಮಾನ್ಯ ಲೋಕಾಯುಕ್ತರವರಿಗೆ ವಹಿಸುವ ಬಗ್ಗೆ.

**ಓದಲಾಗಿದೆ:**

1. ಸರ್ಕಾರಿ ಆದೇಶ ಸಂಖ್ಯೆ:ಇಡಿ 82 ಡಿಜಿಡಿ 2001 ದಿ:13.7.2001
2. ನಿಬಂಧಕರು, ಕರ್ನಾಟಕ ಲೋಕಾಯುಕ್ತ, ಬೆಂಗಳೂರು, ಇವರ DO No: COMPT:UP:LOK: MYS-63: 2001-02:ARLO-3, ದಿನಾಂಕ: 2.9.2003

ಪ್ರಸ್ತಾವನೆ:

ಶ್ರೀ ಎಂ.ಎಸ್.ಪಾಟೀಲ್, ಉಪನಿರ್ದೇಶಕರು, ಸಾರ್ವಜನಿಕ ಶಿಕ್ಷಣ ಇಲಾಖೆ, ಚಿಕ್ಕೋಡಿ, ಇವರು 1979 ರಲ್ಲಿ ಪ್ರೊಬೇಷನರಿ ಪ್ರೌಢಶಾಲಾ ಶಿಕ್ಷಕರಾಗಿ ಆಯ್ಕೆ ಹೊಂದಿ 1981–92 ನೇ ಸಾಲಿನಲ್ಲಿ ಸಲ್ಲಿಸಲಾದ ಆಸ್ತಿ ಮತ್ತು ಋಣ ಪಟ್ಟಿಯಲ್ಲಿ ಯಾವುದೇ ಸ್ಥಿರಾಸ್ತಿ ಮತ್ತು ಚರಾಸ್ತಿ ಇಲ್ಲವೆಂದು ಘೋಷಿಸಿದ್ದು, ತದನಂತರ ಆಸ್ತಿ ಮತ್ತು ಋಣ ಪಟ್ಟಿಯೊಂದಿಗೆ ಸಲ್ಲಿಸಲಾದ ದಾಖಲೆಯನ್ವಯ ಸದರಿಯವರು ಕೆಲವು ನಿವೇಶನಗಳನ್ನು ಹೊಂದಿದ್ದು, ಹಾಗೂ ಸರ್ಕಾರದ ಪೂರ್ವಾನುಮತಿ ಇಲ್ಲದೆ ಅವರ ಪತ್ನಿ ಹೆಸರಿನಲ್ಲಿ ಶಿಕ್ಷಣ ಸಂಜೀವಿನಿ ಎಂಬ ಕೈಗಾರಿಕಾ ಘಟಕವನ್ನು ಹೊಂದಿದ್ದು, ಅದರಿಂದ ಗಣನೀಯವಾದ ಲಾಭವನ್ನು ತೋರಿಸುವ ಮೂಲಕ ಅವರು ಅನ್ಯಮಾರ್ಗದಿಂದ ಅಕ್ರಮವಾಗಿ ಸಂಪತ್ತನ್ನು ಗಳಿಸಿರುವುದು ಮೇಲ್ನೋಟಕ್ಕೆ ನಿಜವೆಂದು ಕಂಡುಬಂದಿದ್ದರಿಂದ ಹಾಗೂ ವಾರ್ಷಿಕ ಆಸ್ತಿ ಮತ್ತು ಋಣ ಪಟ್ಟಿಯನ್ನು ಆಯಾ ವರ್ಷ ಕಳೆದ ನಿಗದಿತ ಅವಧಿಯೊಳಗೆ ಸಂಬಂಧಪಟ್ಟ ಪ್ರಾಧಿಕಾರಕ್ಕೆ ಸಲ್ಲಿಸಲು ವಿಫಲರಾಗಿದ್ದಾರೆಂಬ ಅಂಶವು ಸರ್ಕಾರದ ಗಮನಕ್ಕೆ ಬಂದಿದ್ದರಿಂದ ಅವರ ಮೇಲಿನ ಅಕ್ರಮ ಆಸ್ತಿ ಗಳಿಕೆಯ ಆಪಾದನೆಗಳ ಕೂಲಂಕಷ ತನಿಖೆಗಾಗಿ ಮೇಲೆ ಓದಲಾದ ಕ್ರಮಾಂಕ (1) ರ ದಿನಾಂಕ:13.7.2001 ರ ಆದೇಶದ ಮೂಲಕ ಕರ್ನಾಟಕ ಲೋಕಾಯುಕ್ತ ಅಧಿನಿಯಮ 1984 ರ ಸೆಕ್ಷನ್ 7(2–ಎ) ಅಡಿಯಲ್ಲಿ ಮಾನ್ಯ ಕರ್ನಾಟಕ ಉಪಲೋಕಾಯುಕ್ತರವರಿಗೆ ವಹಿಸಲಾಗಿತ್ತು.

ಮೇಲೆ ಓದಲಾದ ಕ್ರಮಾಂಕ (2) ರ ದಿನಾಂಕ 2.9.2003 ರ ಅರೆ ಸರ್ಕಾರಿ ಪತ್ರದ ಮೂಲಕ ಮಾನ್ಯ ಲೋಕಾಯುಕ್ತರವರ ವರದಿ ಸಂಖ್ಯೆ:Compt:UPLOK:MYS-63:2001-02:ARLO-3 ದಿನಾಂಕ: 1.9.2003 ನ್ನು ಸರ್ಕಾರಕ್ಕೆ ಒದಗಿಸಿ, ಸದರಿ ವರದಿಯ ಮೇಲೆ ಸರ್ಕಾರವು ತೆಗೆದುಕೊಂಡ ನಿರ್ಣಯವನ್ನು ಕರ್ನಾಟಕ ಲೋಕಾಯುಕ್ತ ಅಧಿನಿಯಮ 1984 ರ ನಿಯಮ 12(4) ರಲ್ಲಿ ನಿಗದಿಪಡಿಸಿರುವ ಅವಧಿಯೊಳಗೆ ತಿಳಿಸುವಂತೆ ಕೋರಿದ್ದರು.

ಮಾನ್ಯ ಲೋಕಾಯುಕ್ತರವರ ವರದಿಯಲ್ಲಿನ ಅಂಶದಂತೆ Investigation Officer ತನಿಖೆ ಸಂದರ್ಭದಲ್ಲಿ ಸಂಗ್ರಹಿಸಿದ ದಾಖಲೆಯಂತೆ ಶ್ರೀ ಎಂ.ಎಸ್.ಪಾಟೀಲ್, ಇವರ ಮೇಲಿನ ಆರೋಪದಲ್ಲಿ ಮೇಲ್ನೋಟಕ್ಕೆ ಸತ್ಯಾಂಶವಿರುವುದು ಕಂಡುಬಂದಿರುವುದರಿಂದ ಸದರಿಯವರ ವಿರುದ್ಧ ವಿಚಾರಣೆ ನಡೆಸಲು ಕೆಸಿಎಸ್ (ಸಿಸಿಎ) ನಿಯಮಾವಳಿಗಳು 1957 ರ ನಿಯಮ 14–ಎ ಮೇರೆಗೆ ಸರ್ಕಾರದ ಆದೇಶವನ್ನು ಹೊರಡಿಸಲು ಶಿಫಾರಸ್ಸು ಮಾಡಿದ್ದಾರೆ.

ಮಾನ್ಯ ಲೋಕಾಯುಕ್ತರವರು ಸಲ್ಲಿಸಿರುವ ವರದಿಯಂತೆ ಶ್ರೀ ಎಂ.ಎಸ್.ಪಾಟೀಲ್, ಇವರು ಅಸಮ ಪ್ರಮಾಣದಲ್ಲಿ ಸ್ಥಿರಾಸ್ತಿ ಮತ್ತು ಚರಾಸ್ತಿ ಹೊಂದಿರುವುದು ಮೇಲ್ನೋಟಕ್ಕೆ ಸತ್ಯಾಂಶದಿಂದ ಕೂಡಿರುವುದು ಕಂಡುಬಂದಿದ್ದರಿಂದ ಪ್ರಕರಣದ ಬಗ್ಗೆ ವಿಚಾರಣೆ ನಡೆಸಲು ಮಾನ್ಯ ಲೋಕಾಯುಕ್ತರವರಿಗೆ ವಹಿಸುವುದು ಸೂಕ್ತವೆಂದು ಸರ್ಕಾರವು ನಿರ್ಣಯಿಸಿದೆ. ಆದ್ದರಿಂದ ಈ ಆದೇಶ.

**ಸರ್ಕಾರದ ಆದೇಶ ಸಂಖ್ಯೆ:ಇಡಿ 82 ಡಿಜಿಡಿ 2001 ಬೆಂಗಳೂರು, ದಿನಾಂಕ: 7ನೇ ಅಕ್ಟೋಬರ್ 2004**

ಪ್ರಸ್ತಾವನೆಯಲ್ಲಿ ವಿವರಿಸಲಾದ ಕಾರಣಗಳ ಹಿನ್ನಲೆಯಲ್ಲಿ ಶ್ರೀ ಎಂ.ಎಸ್.ಪಾಟೀಲ್, ಉಪನಿರ್ದೇಶಕರು, ಸಾರ್ವಜನಿಕ ಶಿಕ್ಷಣ ಇಲಾಖೆ, ಚಿಕ್ಕೋಡಿ, ಇವರ ಮೇಲಿನ ಆರೋಪಗಳ ಬಗ್ಗೆ ವಿಚಾರಣೆ ನಡೆಸಲು ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಾವಳಿಗಳು 1957 ರ ನಿಯಮ 14–ಎ ಮೇರೆಗೆ ಮಾನ್ಯ ಲೋಕಾಯುಕ್ತರವರಿಗೆ ವಹಿಸಿ ಆದೇಶಿಸಿದೆ. ಪ್ರಕರಣದ ಬಗ್ಗೆ ವಿಚಾರಣೆ ನಡೆಸಿ ಆದಷ್ಟು ಬೇಗನೆ ವಿಚಾರಣಾ ವರದಿಯನ್ನು ಸಲ್ಲಿಸುವಂತೆ ಆದೇಶಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ

**ಎಫ್.ಆರ್.ಸಂಬರಗಿ**

ಸರ್ಕಾರದ ಅಧೀನ ಕಾರ್ಯದರ್ಶಿ, ಶಿಕ್ಷಣ ಇಲಾಖೆ.(ಸೇ–1,2)

ಪಿ.ಆರ್. 1141

## ENERGY SECRETARIAT

**Sub:** Constitution of a committee to formulate scheme to provide free power supply to Bhagya Jyothi & Kuteer Jyothi installations.

**Read:** Letter No : KPTCL / B-8 / 3312 / 04-05, dated: 15.9.2004 of the Managing Director, Karnataka Power Transmission Corporation Limited.

**PREAMBLE** :

The Managing Director, Karnataka Power Transmission Corporation Limited, in his letter dated : 15.9.2004 read above has suggested to Government to set up a committee to formulate a scheme for free supply power to the Bhagya Jyothi & Kuteer Jyothi consumers.

2. The said proposal has been examined and hence the following Order :

**Government Order No: DE 148 EEB 2004, Bangalore, Dated: 1st October 2004**

3. In the circumstances explained in the preamble, Government are pleased to constitute the following committee to formulate and submit a scheme to the Government, in regards to free supply of power to the Bhagya Jyothi & Kuteer Jyothi consumers.

1. Sri K.C. Reddy, Advisor, to the Hon'ble Minister for Public Works and Energy. - Chairman.
2. Principal Secretary to Government, Energy Department - Member.
3. Managing Director, KPTCL, Bangalore - Member.
4. Managing Director, BESCOM, Bangalore - Member.
5. Director, (Transmission) KPTCL, Bangalore - Member.
6. Director, (Finance) KPTCL, Bangalore - Member.

By Order and in the Name of the Governor of Karnataka.

**K.L. JAYARAM**

Under Secretary to Government, Energy Department.

PR-1136

**PERSONNEL AND ADMINISTRATIVE REFORMS SECRETARIAT**

**Sub:** Terms and conditions of deputation of Sri K. Jairaj, IAS (KN-75) as Senior Public Sector Specialist in the African Unit of the World Bank – Washington DC, USA – reg.

**READ:** Government Notification No. DPAR 168 SME 2004 dated 15.07.2004.

**GOVERNMENT ORDER NO. DPAR 168 SME 2004 BANGALORE, DATED 11TH OCTOBER 2004**

The following terms and conditions of deputation of Sri K. Jairaj, IAS (hereinafter called 'Officer'), to the Africa Unit of the World Bank, Washington DC, USA (hereinafter called the 'Employer') are approved.

**1. Period of deputation:**

The period of his foreign service with World Bank will commence from the date he actually joins his duties under the World Bank and will terminate of the date he relinquishes charge of his duties under the Bank.

**2. Pay and Allowance:**

During the period of foreign service with the World Bank, he will receive from the World Bank, such pay and allowance as are admissible to him from time to time under the rules of World Bank.

**3. Travel Expenses:**

He will be reimbursed by the World Bank for travel and transport expenses for himself, his family members and his personal effects in moving once to Washington during or immediately preceding his joining the World Bank and once for returning to India during or immediately after the expiry of his foreign service with the World Bank under rules of World Bank.

**4. Other Expenses:**

He will also be reimbursed by the World Bank all reasonable expenses incurred in connection with his work with the World Bank as admissible under the rules of World Bank.

**5. Leave:**

During his service with the World Bank, he will be entitled to leave under the rules of the World Bank and the leave salary in respect of the leave so granted by the World Bank will be borne by the World Bank. The period of his foreign service with the World Bank will not count towards earning leave under the Government of India and the leave availed of, by him during his service with the World Bank will not be debited to his leave account with the Government of India.

**6. Disability Leave:**

The World Bank will be liable to pay leave salary in respect of disability leave granted to him on account of any disability incurred in and through the foreign service with the World Bank, even if such disability manifests itself after the termination of his service with the World Bank. The Government of India will not, however, bear any liability on this account.

**7. Joining Time:**

The joining time period both ways will be covered by grant of regular leave of the kind due to admissible to him, which will be granted on request and will be paid by the Government of India accordingly.

**8. Tax Exemption:**

During the period of his foreign service, Shri K. Jairaj, will not be liable to pay any Income-Tax on the salary and allowances received by him from the World Bank.

**9. Leave Salary and Pension Contribution:**

If the period of deputation is five years or more, the retirement benefits will be governed by the provision of the Government of India, Department of Personnel and Administrative Reforms letter No.25011/4/75-AIS (II) dated the 26th September, 1975, as amended from time to time. In brief, the conditions will be as under: -

(a) Shri K. Jairaj may at his option pay the pension contributions to the Government of India in respect of his foreign service and count such service as qualifying for pension under the Government;

**OR**

(b) Avail himself of the retirement benefits admissible under the rules of the World Bank and not count such service as qualifying for pension under the Government. Provided that if he opts for clause (b), the retirement benefits accrued to him under the rules or World Bank, will be payable in Rupees in India and Pension contribution, if any paid by him, shall be refunded to him;

(c) If he opts for clause (b) and rejoins Government on the expiry of his foreign service with the World Bank, the retirement benefits sanctioned by the World Bank, will not be payable concurrently with the salary from the Government but will be credited to the Government account with Accountant General, Karnataka, Bangalore who will credit the amount to the Head of Account "66-Contributions & Recoveries towards pension and other retirement benefits." This amount will be

paid to him along with the other pensionary benefits when he finally retires from the service of the Government.

**10. Retirement Benefits:**

If the period of deputation is one year or more but less than five years, the retirement benefits will be governed by the provisions of Department of Personnel and Administrative Reforms letter No.25011/2/76-AIS(II) dated the 2nd March, 1997 read with the Ministry of Finance, Department of Expenditure's O.M.No.F.1(14)-E.III(B)/76 dated 20.11.1976 as amended from time to time as under:

(a) Shri K. Jairaj will pay pension contribution to the Government of Karnataka, at the rates prescribed from time to time by the President under F.R.116 and Ministry of Finance, Department of Expenditure's O.M. No.F.8(9)-EIII/81 dated 29.07.1982. Contribution will be made in the foreign currency in which the salary is paid, in the manner provided in clause (xiii) below:

(b) On conclusion of foreign service he will be entitled to receive from the World Bank, withdrawal benefits as may be admissible under the rules of the World Bank.

**11. Pension Contribution:**

The amount of pension contribution is to be paid to the Accountant General, Karnataka, Bangalore for credit to the Head of Account "66-Contributions and Recoveries towards pension and other Retirement benefits".

**12.** Pending intimation of the final rate of pension contribution by the Accountant General, Karnataka, Bangalore, Shri K. Jairaj will pay pension contribution to the Government, provisionally at the rate of Rs.4879/- per month. This amount will be paid in the currency in which salary is drawn by him.

**13.** The payment of pension contribution is subject to the conditions laid down under S.R. 307. Shri K. Jairaj will pay pension contribution annually within 15 days of the close of each financial year. If the deputation on foreign service expires before the end of a financial year, the contribution for that period will be paid within 15 days of the date on which the foreign service expires.

**14. Provident Fund:**

During the period of foreign service, he will continue to subscribe to the All India Service (Provident Fund) to which he was subscribing at the time of proceeding on foreign service, in accordance with the All India Service (Provident Fund) Rules. Subscriptions will be paid every month to the Accountant General, Karnataka, Bangalore, in the currency in which salary is paid to him.

**15.** He may at his option pay pension contribution and subscription to the Provident Fund in Indian Rupees directly or through his bankers to the Accountant General, Karnataka, Bangalore. In that event he will remit, once a year, the foreign exchange equivalent of his pension contribution and subscription to the Provident for the year, obtain a certificate of such inward foreign exchange remittances from his bankers and submit the same to Accountant General, Karnataka, Bangalore.

**16. Medical Facilities:**

The World Bank shall afford to Shri K. Jairaj, medical facilities not inferior to those, which he would have enjoyed in the Government service but for his transfer on foreign service. He will not be entitled to claim from the Government of India reimbursement of the medical expenses incurred for himself and the members of his family, during the period of his foreign service with the World Bank.

**17. Repayment of outstanding Loans and Advances:**

Repayment of outstanding loans and advances as also the contributions shall be payable in the foreign currency in which Shri K. Jairaj receives his salary from the World Bank, as required by the Ministry of Finance, Department of the Expenditure in their O.M.No.1(14)-E.III(B)/76 dated 07.12.1976. Shri K. Jairaj may make the payment on this account in the same way as per the provisions made in clause (15) above.

**18. AIS Group Insurance Scheme 1980:**

He will pay monthly contribution in respect of his foreign service for Group Insurance Scheme by cheque in favour of Assistant General, Karnataka, Bangalore as in the case of subscriptions towards G.P.Fund Account with advice to Pay & Accounts Officer, Department of Personnel and Training, New Delhi.

**19. Entitlements:**

He will not be entitled to any T.A., Joining time/Joining time pay from Government till he joins Government post, irrespective of whether he is posted at Bangalore or at another station.

**20. Residuaries:**

In all other matters not being specifically covered in the sanction, Shri K. Jairaj will be governed by such rules and regulations, general orders as may be made or issued by the Government of Karnataka from time to time in consultation with the Government of India.

This issues with the concurrence of Finance Department of Finance Department vide its U.O. Note ACS & Pr.Secy/2923/FD/04 dated 28.06.2004.

By Order and In the Name of the Governor of Karnataka

PR-1167

**B.V. KUMARASWAMY**

Under Secretary to Government, DPAR (Services-1)

## ENERGY SECRETARIAT

**SUB:** Shivana Samudram Power House- Centenary Celebrations – constitution of centenary celebration committee – regarding.

**PREAMBLE:**

The Shivana Samudram power house and the related transmission system has completed 100 years of service. To commemorate this historical event, it has been decided to organise the centenary celebrations of this project. A committee is to be constituted to organise this programme. Hence, this order:

**GOVERNMENT ORDER NO : DE 79 PPC 2004, BANGALORE, DATED: 30th September 2004**

2. In the circumstances explained in the preamble, a committee is constituted to organise the centenary celebration of the Shivana Samudram Power House consisting of the following Members.

| | | | |
|---|---|---|---|
| 1. | Sri. H.D. Revanna,<br>Hon'ble Minister for P.W.D. & Energy,<br>Government of Karnataka, Vidhana Soudha, Bangalore. | - | Chairman |
| 2. | Sri. Krishna,<br>Hon'ble Speaker,<br>Karnataka Legislative Assembly, Vidhana Soudha, Bangalore. | - | Member |
| 3. | Sri. K.C. Reddy,<br>Advisor to Hon'ble Minister for power & Public Works, Bangalore. | - | Member |
| 4. | Sri. M. H. Ambarish, M.P.<br>Mandya Constituency, No : 172, 21st Main Road,<br>J.P. Nagar, Bangalore 560 078. | - | Member |
| 5. | Smt. Thejasveni Sriramesh, M.P.<br>Kanakapura Constituency, Bangalore. | - | Member |
| 6. | Sri. N. Chaluvarayaswami. M.L.A.,<br>Nagamangala, Mandya District. | - | Member |
| 7. | Sri. D.C. Thammana, M.L.A.,<br>Maddur, Mandya District. | - | Member |
| 8. | Smt. M.K. Nagamani, M.L.A.,<br>Kirugavalu, Mandya District. | - | Member |
| 9. | Sri. Dr. K. Annadani, M.L.A.,<br>Malavalli, Mandya District. | - | Member |
| 10. | Sri. M. Srinivas, M.L.A.,<br>Mandya, Mandya District. | - | Member |
| 11. | Sri. H.B. Ramu, M.L.A.,<br>Keragodu, Mandya District. | - | Member |
| 12. | Smt. Vijaya Lakshmamma Bandisidde<br>Gowda, M.L.A., Srirangapattana, Mandya District. | - | Member |
| 13. | Sri. C. S. Puttaraju, M.L.A.,<br>Pandavapura, Mandya District. | - | Member |
| 14. | Sri. M.D. Ramesh Raju, M.L.C.,<br>IInd Cross, Subashnagar, Mandya, Mandya District. | - | Member |
| 15. | Sri. Mari Thibbe Gowda, M.L.C.,<br>No : 3051, Pete Malavalli, Mandya District. | - | Member |
| 16. | Sri. S. M. Shankar, M.L.C.,<br>Somanahalli, Maddur Taluk, Mandya District. | - | Member |
| 17. | Sri. K. T. Srikante Gowda, M.L.C.,<br>No : 1820 A, 8th Main Road, Subashnagar, Mandya,<br>Mandya District. | - | Member |
| 18. | Sri. M. S. Mallajamma, M.L.C.,<br>No : 467, 5th Main, 9th Cross, Sadashivanagar, Bangalore 560 080 | - | Member |
| 19. | Sri. B. Ramachandraiah<br>President, Zilla Panchayat, Mandya District, Mandya. | - | Member |

| | | | |
|---|---|---|---|
| 20. | Sri. Dilip Rau, I.A.S.,<br>Principal Secretary to Government, Energy Department,<br>Government of Karnataka, M.S. Building, Bangalore. | - | Member |
| 21. | Sri. V. P. Madhu, I.A.S.,<br>Managing Director, K.P.T.C.L. Cauvery Bhavan, Bangalore. | - | Member |
| 22. | Sri. L.V. Nagarajan, I.A.S.,<br>Managing Director, K.P.C.L. No : 82, Shakthi Bhavan,<br>Race Course Road, Bangalore. | - | Member |
| 23. | Sri. Arvinda G. Rishbud, I.A.S.,<br>Managing Director, MESCOM / CESCOM Mangalore. | - | Member |
| 24. | Sri. S. Shivamallu,<br>Director, (Transmission) K.P.T.C.L. Cauvery Bhavan, Bangalore. | - | Member |
| 25. | Sri. S.M. Zafrulla,<br>Technical Director, K.P.C.L. No : 82, Shakthi Bhavan,<br>Race Course Road, Bangalore. | - | Member |
| 26. | Sri. S.V. Nesargi,<br>Managing Director, V.V./N.L. D.G. Plant, Yelahanka, Bangalore. | - | Member |
| 27. | Deputy Commissioner,<br>Mysore District, Mysore. | - | Member |
| 28. | Deputy Commissioner,<br>Mandya District, Mandya. | - | Member |
| 29. | Superintendent of Police,<br>Mandya District, Mandya. | - | Member |
| 30. | Sri. S Aneez Siraj,<br>Chief Executive Officer, Zilla Panchayath, Mandya District, Mandya. | - | Member |
| 31. | Sri. Puttaswamy Gowda,<br>President, Taluk Panchayath, Malavalli Taluk, Malavalli,<br>Mandya District. | - | Member |
| 32. | Smt. Padma<br>Member, Zilla Panchayath, Malavalli Taluk, Mandya District. | - | Member |
| 33. | Smt. Sarvamangala,<br>Member, Taluk Panchayath, Malavalli Taluk, Mandya District. | - | Member |
| 34. | Sri. Mahadeva Shetty,<br>Member, Taluk Panchayath,<br>Malavalli Taluk, Mandya District. | - | Member |
| 35. | Executive Engineer<br>Public Works Department, Mandya Division Mandya. | - | Member |
| 36. | Sri. Narayana Gowda<br>President, K.P.T.C.L. Employees Union, Bangalore. | - | Member |

By Order and in the Name of the Governor of Karnataka.

**K.L.JAYARAM**

Under Secretary to Government,
Energy Department.

PR-1102

**ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಸಚಿವಾಲಯ**

**ವಿಷಯ:-** 1976ರ ಜೀತಗಾರಿಕೆ ಪದ್ಧತಿ (ನಿರ್ಮೂಲನೆ) ಕಾಯ್ದೆ ಹಾಗೂ ನಿಯಮಗಳು ಅಡಿಯಲ್ಲಿ ಆರಕ್ಷಕ ಸೇವೆ ಸೇರ್ಪಡೆ ಸಂಬಂಧ ಸೂಕ್ತ ಬದಲಾವಣೆಗಳನ್ನು ಶಿಫಾರಸ್ಸು ಮಾಡಲು ಉಪ ಸಮಿತಿಯನ್ನು ರಚಿಸುವ ಬಗ್ಗೆ.

**ಓದಲಾಗಿದೆ:-**

1. ಸರ್ಕಾರದ ಆದೇಶ ಸಂಖ್ಯೆ.ಆರ್‌ಡಿಪಿ.4.ಆರ್‌ಬಿಎಲ್.96 ದಿನಾಂಕ. 20.2.1997.
2. ಸರ್ಕಾರದ ಅಪರ ಮುಖ್ಯ ಕಾರ್ಯದರ್ಶಿಯವರ ಅಧ್ಯಕ್ಷತೆಯಲ್ಲಿ ದಿನಾಂಕ.12.7.2004 ರಂದು ನಡೆದ ರಾಜ್ಯದ ಉನ್ನತ ಅಧಿಕಾರದ ಸಮಿತಿಯ ಸಭೆ ನಡವಳಿಗಳು.

**ಪ್ರಸ್ತಾವನೆ:**

ರಾಜ್ಯದಲ್ಲಿ ಜೀತದಾಳುಗಳ ಗುರುತಿಸುವಿಕೆ, ಬಿಡುಗಡೆ ಹಾಗೂ ಪುನರ್ವಸತಿ, ಮತ್ತು 1976ರ ಜೀತಗಾರಿಕೆ ಪದ್ಧತಿ (ನಿರ್ಮೂಲನೆ) ಕಾಯ್ದೆಯ ಪರಿಣಾಮಕಾರಿ ಅನುಷ್ಠಾನ ಸಂಬಂಧ ಕೈಗೊಂಡ ಕ್ರಮಗಳ ಬಗ್ಗೆ ರಾಜ್ಯ ಮಟ್ಟದಲ್ಲಿ ಉಸ್ತುವಾರಿ ಪರಿಶೀಲನೆ ಮಾಡುವ ಸಲುವಾಗಿ, ಸರ್ಕಾರಿ ಆದೇಶ ಸಂಖ್ಯೆ. ಆರ್‌ಡಿಪಿ.4.ಆರ್‌ಬಿಎಲ್.96 ದಿನಾಂಕ.20.2.1997ರಲ್ಲಿ ಸರ್ಕಾರದ ಅಪರ ಮುಖ್ಯ ಕಾರ್ಯದರ್ಶಿಯವರ ಅಧ್ಯಕ್ಷತೆಯಲ್ಲಿ ಉನ್ನತ ಅಧಿಕಾರದ ಸಮಿತಿಯನ್ನು ರಚನೆ ಮಾಡಲಾಗಿರುತ್ತದೆ.

ಈ ಸಮಿತಿಯು ಸಮಿತಿಯ ಅಧ್ಯಕ್ಷರಾದ ಸರ್ಕಾರದ ಅಪರ ಮುಖ್ಯ ಕಾರ್ಯದರ್ಶಿಯವರ ಅಧ್ಯಕ್ಷತೆಯಲ್ಲಿ ದಿನಾಂಕ.12.7.2004ರಂದು ಸಭೆ ಸೇರಿ ಸುದೀರ್ಘ ಚರ್ಚೆ ನಡೆಸಿತು. ಈ ಸಮಿತಿಯ ಸದಸ್ಯರಾದ ಸರ್ಕಾರದ ಕಾರ್ಯದರ್ಶಿ, ಗೃಹ ಇ ಲಾಖೆ (ಆರಕ್ಷಕ) ಇ ವರು ಸದರಿ ಸಭೆಯಲ್ಲಿ ``ಜೀತಗಾರಿಕೆ ಪದ್ಧತಿ (ನಿರ್ಮೂಲನೆ) ಕಾಯ್ದೆ ಹಾಗೂ ನಿಯಮಗಳು 1976ರ ಅಡಿಯಲ್ಲಿ ಜೀತಪದ್ಧತಿ ನಿರ್ಮೂಲನೆಗೆ ಸಂಬಂಧಿಸಿದ ಯಾವುದೇ

ಕಾರ್ಯದಲ್ಲಿ ಆರಕ್ಷಕ ಸೇವೆಯನ್ನು ತೊಡಗಿಸಿಕೊಳ್ಳುವ ಅವಕಾಶವಿರುವುದಿಲ್ಲ. ಜೀತದಾಳುಗಳ ಪತ್ತೆ ಹಚ್ಚುವಿಕೆ ಕಾರ್ಯದಿಂದ ಹಿಡಿದು ಜೀತಕ್ಕೆ ಇಟ್ಟುಕೊಂಡಿರುವ ವ್ಯಕ್ತಿ ಗಳ/ಮಾಲೀಕರುಗಳ ವಿರುದ್ಧ ಕ್ರಮ ಜರುಗಿಸುವ ಕಾರ್ಯದವರೆಗೆ ಪ್ರತಿ ಕಾರ್ಯದಲ್ಲೂ ಆರಕ್ಷಕ ಸೇವೆಯನ್ನು ತೊಡಗಿಸಿಕೊಂಡಲ್ಲಿ ಮಾತ್ರ, ಈ ಅಮಾನವೀಯ ಪದ್ಧತಿಯನ್ನು ನಿರ್ಮೂಲನೆ ಮಾಡಲು ಕಠಿಣ ಕ್ರಮಗಳನ್ನು ತೆಗೆದುಕೊಳ್ಳಬಹುದಾಗಿರುತ್ತದೆ'' ಎಂದು ಅಭಿಪ್ರಾಯಪಟ್ಟಿರುತ್ತಾರೆ.

1976ರ ಜೀತಗಾರಿಕೆ ಪದ್ಧತಿ (ನಿರ್ಮೂಲನೆ) ಕಾಯ್ದೆ ಹಾಗೂ ನಿಯಮಗಳು ಕೇಂದ್ರ ಸರ್ಕಾರದಿಂದ ರೂಪಿತಗೊಂಡು ಜಾರಿಗೆ ಬಂದಿರುತ್ತದೆ. ಇ ದನ್ನು ಅನುಷ್ಠಾನ ಮಾಡುವ ಕ್ರಮ ಹೊರತುಪಡಿಸಿ ಯಾವುದೇ ಮಾರ್ಪಾಟು ಮಾಡುವ ಅಧಿಕಾರ ರಾಜ್ಯಕ್ಕೆ ಇ ರುವುದಿಲ್ಲ. ಗೃಹ ಇ ಲಾಖೆಯ(ಆರಕ್ಷಕ) ಕಾರ್ಯದರ್ಶಿಯವರು ಮೇಲ್ಕಂಡ ಸಭೆಯಲ್ಲಿ ವ್ಯಕ್ತಪಡಿಸಿದ ಅಭಿಪ್ರಾಯವು ಸಮಂಜಸವೆಂದು ಕಂಡುಬಂದ ಹಿನ್ನೆಲೆಯಲ್ಲಿ, ಈ ಉನ್ನತ ಅಧಿಕಾರದ ಸಮಿತಿಯು ಸದರಿ ವಿಚಾರದಲ್ಲಿ ಈ ಕೆಳಕಂಡಂತೆ ನಿರ್ಣಯ ತೆಗೆದು ಕೊಂಡಿರುತ್ತದೆ.

''ಕಾಯ್ದೆಯಲ್ಲಿ ಅವಶ್ಯವಿರುವ ಕಡೆಗಳಲ್ಲಿ ಸೂಕ್ತ ಮಾರ್ಪಾಟುಗಳನ್ನು ಸರ್ಕಾರದ ಪರಿಗಣನೆಗಾಗಿ ಸಲ್ಲಿಸುವ ಸಲುವಾಗಿ, ಕಾನೂನು ಇ ಲಾಖೆಯ ಕಾರ್ಯದರ್ಶಿಯವರನ್ನು ಅಧ್ಯಕ್ಷರನ್ನಾಗಿ ಹಾಗೂ ಗೃಹ ಇ ಲಾಖೆಯ(ಆರಕ್ಷಕ) ಕಾರ್ಯದರ್ಶಿ/ಕಾರ್ಮಿಕ ಇ ಲಾಖೆಯ ಜಂಟಿ ಕಾರ್ಯದರ್ಶಿ/ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಇ ಲಾಖೆಯ ನಿರ್ದೇಶಕರು(ಸ್ವ.ಉ.ಕಾ.) ಇ ವರುಗಳನ್ನು ಸದಸ್ಯರುಗಳನ್ನಾಗಿ ಒಳಗೊಂಡಂತೆ ಒಂದು ಉಪ ಸಮಿತಿಯನ್ನು ರಚಿಸಬೇಕು.''

ಜೀತಪದ್ಧತಿ ಎಂಬ ಪಿಡುಗನ್ನು ರಾಜ್ಯದಲ್ಲಿ ಸಂಪೂರ್ಣವಾಗಿ ನಿರ್ಮೂಲನೆ ಮಾಡಲು ಆರಕ್ಷಕ ಸೇವೆಯ ಅಗತ್ಯತೆಯನ್ನು ಹಾಗೂ ಕಾರ್ಮಿಕ ಇ ಲಾಖೆಯಲ್ಲಿ ಜಂಟಿ ಕಾರ್ಯದರ್ಶಿ ಹುದ್ದೆ ರದ್ದಾಗಿರುವ ವಿಚಾರವನ್ನು ಮನಗಂಡು, ಸರ್ಕಾರವು ಸದರಿ ಸಮಿತಿಯ ನಿರ್ಣಯದಂತೆ ಮಾರ್ಪಾಟಿನೊಂದಿಗೆ ಒಂದು ಉಪ ಸಮಿತಿಯನ್ನು ರಚಿಸಲು ಉದ್ದೇಶಿಸಿರುತ್ತದೆ.

ಅದಕ್ಕಾಗಿ ಈ ಆದೇಶ.

**ಸರ್ಕಾರದ ಆದೇಶ ಸಂಖ್ಯೆ.ಗ್ರಾಅಪ.12.ಆರ್‌ಬಿಎಲ್.2004 ಬೆಂಗಳೂರು, ದಿನಾಂಕ: 11ನೇ ಅಕ್ಟೋಬರ್ 2004**

1976ರ ಜೀತಗಾರಿಕೆ ಪದ್ಧತಿ (ನಿರ್ಮೂಲನೆ) ಕಾಯ್ದೆ ಹಾಗೂ ನಿಯಮಗಳು ಅಡಿಯಲ್ಲಿ ಆರಕ್ಷಕ ಸೇವೆಯನ್ನು ಸೇರ್ಪಡೆ ಮಾಡಿದ್ದಲ್ಲಿ, ಆಗಬೇಕಾದ ಸೂಕ್ತ ಮಾರ್ಪಾಟುಗಳನ್ನು ಸರ್ಕಾರಕ್ಕೆ ಶಿಫಾರಸ್ಸು ಮಾಡುವ ಸಲುವಾಗಿ ಈ ಕೆಳಕಂಡಂತೆ ಉಪ ಸಮಿತಿಯನ್ನು ರಚಿಸಲಾಗಿದೆ.

| | | |
|---|---|---|
| 1 | ಸರ್ಕಾರದ ಕಾರ್ಯದರ್ಶಿ, ಕಾನೂನು ಇ ಲಾಖೆ | ಅಧ್ಯಕ್ಷರು |
| 2 | ಸರ್ಕಾರದ ಕಾರ್ಯದರ್ಶಿ, ಗೃಹ ಇ ಲಾಖೆ(ಆರಕ್ಷಕ) | ಸದಸ್ಯರು |
| 3 | ವಿಶೇಷಾಧಿಕಾರಿ, ಬಾಲಕಾರ್ಮಿಕ ಕೋಶ ಹಾಗೂ ಪದ ನಿಮಿತ್ತ ಉಪ ಕಾರ್ಯದರ್ಶಿ, ಕಾರ್ಮಿಕ ಇ ಲಾಖೆ | ಸದಸ್ಯರು |
| 4 | ನಿರ್ದೇಶಕರು, ಸ್ವ ಉದ್ಯೋಗ ಕಾರ್ಯಕ್ರಮಗಳು, ಗ್ರಾಮೀಣಾಭಿವೃದ್ಧಿ ಮತ್ತು ಪಂ.ರಾಜ್ ಇ ಲಾಖೆ | ಸದಸ್ಯ ಕಾರ್ಯದರ್ಶಿ |

1. ಈ ಸಮಿತಿಯು ಈ ಆದೇಶ ಹೊರಡಿಸಿದ ದಿನಾಂಕದಿಂದ ಜಾರಿಗೆ ಬರತಕ್ಕದ್ದು.
2. ಈ ಸಮಿತಿಯು ನಿಯತಕಾಲಿಕವಾಗಿ ಸಭೆ ಸೇರಿ, 1976ರ ಜೀತಗಾರಿಕೆ ಪದ್ಧತಿ (ನಿರ್ಮೂಲನೆ) ಕಾಯ್ದೆ ಹಾಗೂ ನಿಯಮಗಳ ಪರಿಣಾಮಕಾರಿ ಅನುಷ್ಠಾನಕ್ಕೆ ಅವಶ್ಯ ವಿರುವ ಸೂಕ್ತ ತಿದ್ದುಪಡಿ/ಮಾರ್ಪಾಟುಗಳ ಬಗ್ಗೆ ಶಿಫಾರಸ್ಸನ್ನು ಆರು ತಿಂಗಳ ಅವಧಿಯೊಳಗೆ ಉನ್ನತ ಅಧಿಕಾರದ ಸಮಿತಿಗೆ ಮಂಡಿಸತಕ್ಕದ್ದು.
3. ಈ ಆದೇಶವನ್ನು ಸರ್ಕಾರದ ಅಪರ ಮುಖ್ಯ ಕಾರ್ಯದರ್ಶಿಯವರ ದಿನಾಂಕ.7.10.2004ರ ಅನುಮತಿಯಂತೆ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಬಿ .ಎಂ. ಶಿವಪ್ರಕಾಶ್**

ಪಿ.ಆರ್. 1181

ನಿರ್ದೇಶಕರು, ಸ್ವ ಉದ್ಯೋಗ ಕಾರ್ಯಕ್ರಮಗಳು
ಹಾಗೂ ಪದನಿಮಿತ್ತ ಜಂಟಿ ಕಾರ್ಯದರ್ಶಿ,
ಗ್ರಾಮೀಣಾಭಿವೃದ್ದಿ ಮತ್ತು ಪಂಚಾಯತ್ ರಾಜ್ ಇ ಲಾಖೆ.

**ವಿಷಯ:-** ಜೀತವಿಮುಕ್ತರ ಪುನರ್ವಸತಿ ಕಾರ್ಯಕ್ರಮವನ್ನು ಸಂಪನ್ಮೂಲ ಕ್ರೋಢೀಕರಣ ಮುಖಾಂತರ ಅನುಷ್ಠಾನಗೊಳಿಸಲು ಜಿಲ್ಲಾ ಮಟ್ಟದಲ್ಲಿ ತ್ರಿಸದಸ್ಯ ಸಮಿತಿಯನ್ನು ರಚಿಸುವ ಬಗ್ಗೆ.

**ಓದಲಾಗಿದೆ:-**
1. ದಿನಾಂಕ.9-10 ಅಕ್ಟೋಬರ್ 2003ರಂದು ಭಾರತೀಯ ವಿಶ್ವ ವಿದ್ಯಾಲಯದ ರಾಷ್ಟ್ರೀಯ ಕಾನೂನು ಶಾಲೆ, ಬೆಂಗಳೂರು ಇ ಲ್ಲಿ ಜೀತಪದ್ಧತಿ / ಬಾಲ ಕಾರ್ಮಿಕ ನಿರ್ಮೂಲನೆ ಕುರಿತು ನಡೆದ 2 ದಿನಗಳ ಕಾರ್ಯಾಗಾರದ ಶಿಫಾರಸ್ಸುಗಳು.
2. ದಿನಾಂಕ.28.7.2004ರಂದು ಶ್ರೀ.ಕೆ.ಆರ್.ವೇಣುಗೋಪಾಲ್,ಭಾಆಸೇ (ನಿವೃತ್ತ), ವಿಶೇಷ ವರದಿಗಾರರು, ರಾಷ್ಟ್ರೀಯ ಮಾನವ ಹಕ್ಕುಗಳ ಆಯೋಗ ಇ ವರ ಅಧ್ಯಕ್ಷತೆಯಲ್ಲಿ ನಡೆದ ಸಭೆಯ ನಡವಳಿಗಳು.

**ಪ್ರಸ್ತಾವನೆ:**

ರಾಜ್ಯದಲ್ಲಿ ಜೀತಪದ್ಧತಿ ಹಾಗೂ ಬಾಲಕಾರ್ಮಿಕ ಪದ್ಧತಿಯನ್ನು ನಿರ್ಮೂಲನೆ ಮಾಡುವ ಸಂಬಂಧ ವಿವಿಧ ಕಾಯ್ದೆಗಳ ಅನುಷ್ಠಾನ ಕುರಿತು ಜಿಲ್ಲಾ ಮಟ್ಟದ ಹಾಗೂ ಹಲವು ಉಪ ವಿಭಾಗೀಯ ಮಟ್ಟದ ಕಂದಾಯ, ಆರಕ್ಷಕ, ಕಾರ್ಮಿಕ, ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್‌ರಾಜ್ ಇ ಲಾಖೆಗಳ ಅಧಿಕಾರಿಗಳಿಗೆ 2 ದಿನಗಳ ಜಾಗೃತ ಕಾರ್ಯಾಗಾರವನ್ನು ಬೆಂಗಳೂರಿನ ಭಾರತೀಯ ವಿಶ್ವವಿದ್ಯಾಲಯದ ರಾಷ್ಟ್ರೀಯ ಕಾನೂನು ಶಾಲೆಯಲ್ಲಿ ದಿನಾಂಕ.9-10 ಅಕ್ಟೋಬರ್ 2003 ರಂದು ಏರ್ಪಡಿಸಲಾಗಿತ್ತು. ಸದರಿ ಕಾರ್ಯಾಗಾರದಲ್ಲಿ ''ಜೀತವಿಮುಕ್ತರಿಗೆ ಹಾಗೂ ಬಾಲಕಾರ್ಮಿಕವಿಮುಕ್ತರಿಗೆ ಪುನರ್ವಸತಿ ಸೌಲಭ್ಯಗಳನ್ನು ಸಕಾಲದಲ್ಲಿ ಒದಗಿಸಲು ವಿವಿಧ ಯೋಜನೆಗಳ ಅಡಿಯಲ್ಲಿ ಲಭ್ಯವಿರುವ ಅನುದಾನವನ್ನು ಕ್ರೋಢೀಕರಣ ಮಾಡುವ ಉದ್ದೇಶಕ್ಕಾಗಿ, ಜಿಲ್ಲಾಧಿಕಾರಿಯ ಅಧ್ಯಕ್ಷತೆಯಲ್ಲಿ ಜಿಲ್ಲಾ ಪಂಚಾಯತಿಯ ಅಧ್ಯಕ್ಷರು

ಹಾಗೂ ಜಿಲ್ಲಾ ಪಂಚಾಯತಿ ಮುಖ್ಯ ಕಾರ್ಯನಿರ್ವಾಹಕ ಅಧಿಕಾರಿಯನ್ನು ಸದಸ್ಯರುಗಳನ್ನಾಗಿ ಒಳಗೊಂಡಂತೆ ಒಂದು ಸಮಿತಿಯನ್ನು ರಚಿಸಬೇಕು'' ಎಂಬ ಅಭಿಪ್ರಾಯವು ಶಿಫಾರಸ್ಸಾಗಿ ಮೂಡಿಬಂದಿರುತ್ತದೆ.

ಮೇಲ್ಕಂಡ ಶಿಫಾರಸ್ಸನ್ನು ಅನುಷ್ಠಾನಗೊಳಿಸುವ ಸಲುವಾಗಿ ದಿನಾಂಕ.28.7.2004 ರಂದು ರಾಷ್ಟ್ರೀಯ ಮಾನವ ಹಕ್ಕುಗಳ ಆಯೋಗದ ವಿಶೇಷ ವರದಿಗಾರರಾದ ಶ್ರೀ.ಕೆ.ಆರ್.ವೇಣುಗೋಪಾಲ್, ಇ ವರ ಅಧ್ಯಕ್ಷತೆಯಲ್ಲಿ ನಡೆದ ಸಭೆಯಲ್ಲಿ ''ಜಿಲ್ಲಾ ಮಟ್ಟದಲ್ಲಿ ಜಾಗೃತ / ಪರಾಮರ್ಶಕ ಸಮಿತಿಗಳು ಇ ದ್ದಾಗ್ಯೂ, ಜೀತವಿಮುಕ್ತರ ಪುನರ್ವಸತಿ ಕಾರ್ಯವನ್ನು ತುರ್ತಾಗಿ ಆದ್ಯತೆ ಮೇಲೆ ಕೈಗೊಳ್ಳುವ ಸಲುವಾಗಿ ಜಿಲ್ಲಾ ಮಟ್ಟದಲ್ಲಿ ಜಿಲ್ಲಾ ಪಂಚಾಯತಿಯ ಅಧ್ಯಕ್ಷರ ನೇತೃತ್ವದಲ್ಲಿ ಜಿಲ್ಲಾಧಿಕಾರಿಯನ್ನು ಸದಸ್ಯರನ್ನಾಗಿ ಹಾಗೂ ಜಿಲ್ಲಾ ಪಂಚಾಯತಿಯ ಮುಖ್ಯ ಕಾರ್ಯ ನಿರ್ವಾಹಕ ಅಧಿಕಾರಿಯನ್ನು ಸದಸ್ಯ ಕಾರ್ಯದರ್ಶಿಯನ್ನಾಗಿ ಒಳಗೊಂಡಂತೆ ತ್ರಿಸದಸ್ಯ ಸಮಿತಿಯನ್ನು ರಚಿಸುವಂತೆ'' ತೀರ್ಮಾನವಾಗಿರುತ್ತದೆ.

ಹಂಗರಹಳ್ಳಿ ಜೀತಪ್ರಕರಣದ ಹಿನ್ನೆಲೆಯಲ್ಲಿ ರಾಜ್ಯಾದ್ಯಂತ ಕೈಗೊಳ್ಳಲಾದ ಮರು ಸಮೀಕ್ಷೆಯಿಂದ 2040 ಜೀತದಾಳುಗಳು ಪತ್ತೆಯಾಗಿದ್ದು ಇ ವರನ್ನು ಜೀತಪದ್ಧತಿಯಿಂದ ವಿಮುಕ್ತಗೊಳಿಸಲಾಗಿದೆ. ಈ ಪೈಕಿ 1890 ಜೀತವಿಮುಕ್ತರುಗಳಿಗೆ ಪುನರ್ವಸತಿ ಒದಗಿಸಲು ಕೇಂದ್ರ ಪುರಸ್ಕೃತ ಕಾರ್ಯಯೋಜನೆಯಡಿ ರೂ.3.708 ಕೋಟಿಗಳ ಅನುದಾನವನ್ನು ಒದಗಿಸ ಲಾಗಿದೆ. ಜೀತವಿಮುಕ್ತರುಗಳ ಪುನರ್ವಸತಿ ಕಾರ್ಯವನ್ನು ಸಕಾಲದಲ್ಲಿ ಕೈಗೊಳ್ಳದಿದ್ದಲ್ಲಿ ಅವರುಗಳು ಜೀತಪದ್ಧತಿಗೆ ಮರಳುವ ಸಂಭವವಿರುವುದರಿಂದ ಅದನ್ನು ತಡೆಗಟ್ಟುವ ನಿಟ್ಟಿನಲ್ಲಿ ಜೀತ ವಿಮುಕ್ತರುಗಳಿಗೆ ಪುನರ್ವಸತಿ ಸೌಲಭ್ಯಗಳನ್ನು ಸಮರೋಪಾದಿಯಲ್ಲಿ ಒದಗಿಸುವುದು ಅತ್ಯವಶ್ಯಕವಾಗಿರುತ್ತದೆ. ಕೇಂದ್ರ ಪುರಸ್ಕೃತ ಕಾರ್ಯಯೋಜನೆ ಅಡಿ ಕೇಂದ್ರ ಸರ್ಕಾರದಿಂದ ಅನುದಾನ ಪಡೆದು ಜಿಲ್ಲಾ ಪಂಚಾಯತಿಗಳಿಗೆ ಬಿಡುಗಡೆ ಮಾಡಲು ಕಾಲಾವಕಾಶ ಬೇಕಾಗಿದ್ದು, ಆದರೆ ಜೀತವಿಮುಕ್ತರುಗಳಿಗೆ ಜಿಲ್ಲಾ ಮಟ್ಟದಲ್ಲಿ ಲಭ್ಯವಿರುವ ಯೋಜನೆಗಳ ಅಡಿಯಲ್ಲಿ ಪುನರ್ವಸತಿ ಸೌಲಭ್ಯಗಳನ್ನು ತುರ್ತಾಗಿ ಒದಗಿಸಬಹುದಾಗಿರುತ್ತೆ. ಆದುದರಿಂದ ಹಾಲಿ ಅನುಷ್ಠಾನಗೊಳಿಸಲಾಗುತ್ತಿರುವ ವಿವಿಧ ಯೋಜನೆಗಳ ಅಡಿಯಲ್ಲಿ ಲಭ್ಯವಿರುವ ಅನುದಾನವನ್ನು ಕ್ರೋಢೀಕರಿಸಿ, ಜೀತವಿಮುಕ್ತರುಗಳಿಗೆ ಪುನರ್ವಸತಿ ಸೌಲಭ್ಯಗಳನ್ನು ಒದಗಿಸುವ ಸಂಬಂಧ ತುರ್ತು ಕ್ರಮ ಕೈಗೊಳ್ಳಲು ಜಿಲ್ಲಾ ಮಟ್ಟದಲ್ಲಿ ಸಮಿತಿಯೊಂದನ್ನು ರಚಿಸಲು ಸರ್ಕಾರ ಉದ್ದೇಶಿಸಿರುತ್ತೆ. ಅದಕ್ಕಾಗಿ ಈ ಆದೇಶ.

**ಸರ್ಕಾರದ ಆದೇಶ ಸಂಖ್ಯೆ.ಗ್ರಾಅಪ.13.ಆರ್‌ಬಿಎಲ್.2003, ಬೆಂಗಳೂರು, ದಿನಾಂಕ: 6ನೇ ಸೆಪ್ಟೆಂಬರ್ 2004**

1976ರ ಜೀತಗಾರಿಕೆ ಪದ್ಧತಿ (ನಿರ್ಮೂಲನೆ) ಕಾಯ್ದೆ ಹಾಗೂ ನಿಯಮಗಳಂತೆ ಜೀತಪದ್ಧತಿ ನಿರ್ಮೂಲನೆಗೆ ಹಾಗೂ ಕೇಂದ್ರ ಪುರಸ್ಕೃತ ಕಾರ್ಯಯೋಜನೆಯಂತೆ ಜೀತ ವಿಮುಕ್ತರುಗಳ ಪುನರ್ವಸತಿಗೆ ಅಗತ್ಯ ಕ್ರಮಗಳನ್ನು ಆದ್ಯತೆ ಮೇರೆ ಕೈಗೊಳ್ಳುವ ಸಲುವಾಗಿ ಪ್ರತಿ ಜಿಲ್ಲಾ ಮಟ್ಟದಲ್ಲಿ ಈ ಕೆಳಕಂಡಂತೆ ತ್ರಿಸದಸ್ಯ ಸಮಿತಿಯನ್ನು ರಚಿಸಲಾಗಿದೆ.

| | |
|---|---|
| 1. ಜಿಲ್ಲಾ ಪಂಚಾಯತಿಯ ಅಧ್ಯಕ್ಷರು | .. ಅಧ್ಯಕ್ಷರು |
| 2. ಜಿಲ್ಲೆಯ ಜಿಲ್ಲಾಧಿಕಾರಿ ಹಾಗೂ ಜಿಲ್ಲಾ ದಂಡಾಧಿಕಾರಿ | .. ಸದಸ್ಯರು |
| 3. ಜಿಲ್ಲಾ ಪಂಚಾಯತಿಯ ಮುಖ್ಯ ಕಾರ್ಯನಿರ್ವಾಹಕ ಅಧಿಕಾರಿ | .. ಸದಸ್ಯ ಕಾರ್ಯದರ್ಶಿ |

1. ಈ ಸಮಿತಿಯು ತಕ್ಷಣದಿಂದ ಜಾರಿಗೆ ಬರುವಂತೆ ಅಸ್ತಿತ್ವಕ್ಕೆ ಬರತಕ್ಕದ್ದು.
2. ಈ ಸಮಿತಿಯ ಮುಖ್ಯ ಉದ್ದೇಶವು ಜೀತವಿಮುಕ್ತರುಗಳನ್ನು ಜೀತಪದ್ಧತಿಯಿಂದ ಬಿಡುಗಡೆಗೊಳಿಸಿದ ಕೂಡಲೇ ಜಿಲ್ಲಾ ಮಟ್ಟದಲ್ಲಿ ವಿವಿಧ ಯೋಜನೆಗಳ ಅಡಿಯಲ್ಲಿ ಲಭ್ಯವಿರುವ ಅನುದಾನವನ್ನು ಕ್ರೋಢೀಕರಿಸಿ ಸೂಕ್ತ ಪುನರ್ವಸತಿ ಸೌಲಭ್ಯಗಳನ್ನು ಅವರಿಗೆ ಕಲ್ಪಿಸುವುದಾಗಿರುತ್ತದೆ.
3. ಈ ಸಮಿತಿಯು ಕನಿಷ್ಟ ಪ್ರತಿ ಮೂರು ತಿಂಗಳಿಗೊಮ್ಮೆ ಸಭೆ ಸೇರಿ, ಜೀತವಿಮುಕ್ತರುಗಳಿಗೆ ಒದಗಿಸಲಾದ ಪುನರ್ವಸತಿ ಸೌಲಭ್ಯಗಳ ಬಗ್ಗೆ ಪ್ರಗತಿ ಪರಿಶೀಲನೆ ನಡೆಸತಕ್ಕದ್ದು.
4. ಈ ಸಮಿತಿಯು ಜೀತಪದ್ಧತಿ ನಿರ್ಮೂಲನೆ ಹಾಗೂ ಜೀತವಿಮುಕ್ತರುಗಳ ಪುನರ್ವಸತಿಗೆ ಕ್ರಮವಾಗಿ ಸಂಬಂಧಿಸಿದ ಜಿಲ್ಲಾ ಮಟ್ಟದ ಜಾಗೃತ ಸಮಿತಿ ಹಾಗೂ ಜಿಲ್ಲಾ ಮಟ್ಟದ ಪರಾಮರ್ಶಕ ಸಮಿತಿ ನಡವಳಿಗಳನ್ನು ಪರಿಶೀಲಿಸಿ, ಆ ಸಮಿತಿಗಳಿಗೆ ಸೂಕ್ತ ಮಾರ್ಗ ದರ್ಶನಗಳನ್ನು ನೀಡತಕ್ಕದ್ದು.
5. ಈ ಆದೇಶವನ್ನು ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಇ ಲಾಖೆಯ ಆಂತರಿಕ ಆರ್ಥಿಕ ಸಲಹೆಗಾರರ ಸಹಮತಿ ಸಂ.ಗ್ರಾಅಪ.265.ಪಿಬಿಎಸ್.2004 ದಿನಾಂಕ.3.9.2004 ರಂತೆ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಟಿ.ಶಾಮ್‌ಭಟ್**

ಪಿ.ಆರ್. 1182

ನಿರ್ದೇಶಕರು (ಸ್ವ.ಉ.ಕಾ.) ಹಾಗೂ ಸರ್ಕಾರದ ಪದನಿಮಿತ್ತ ಜಂಟಿ ಕಾರ್ಯದರ್ಶಿ,
ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಇ ಲಾಖೆ

**ವಿಷಯ:-** ಶ್ರೀ ಟಿ.ಎಸ್.ರಾಮನಾಥಗುಪ್ತ , ಅಂದಿನ ಸಹಾಯಕ ಇ ಂಜಿನಿಯರ್, ಜಿಲ್ಲಾ ಪಂಚಾಯತ್ ಇ ಂಜಿನಿಯರಿಂಗ್ ಉಪವಿಭಾಗ, ಪಾವಗಡ ಇ ವರ ವಿರುದ್ದ ಇ ಲಾಖಾ ವಿಚಾರಣೆ ನಂತರ ದಂಡನೆ ವಿಧಿಸುವ ಬಗ್ಗೆ - ಅಂತಿಮ ಆದೇಶ.

**ಓದಲಾಗಿದೆ:-**
1. ಮುಖ್ಯ ಕಾರ್ಯನಿರ್ವಾಹಕ, ಜಿಲ್ಲಾ ಪಂಚಾಯತ್, ತುಮಕೂರು ಇ ವರ ಪತ್ರ ಸಂ:ತುಜಿಪಂ,ಆ-ಎ(1) ಇ ೦.87/ 99-2000 ದಿ.27-6-01.
2. ಕಾರಣ ಕೇಳುವ ನೋಟಿಸ್ ಸಂ:ಗ್ರಾಅಪ 20 ಇ ಎನ್ ಕ್ಯೂ 01 ದಿ.3-9-01.
3. ಆದೇಶ ಸಂ:ಗ್ರಾಅಪ 20 ಇ ಎನ್ ಕ್ಯೂ 01 ದಿ.26-4-02.
4. ವಿಚಾರಣಾಧಿಕಾರಿಗಳ ದಿ.28-12-02ರ ವರದಿ.
5. 2ನೇ ಕಾರಣ ಕೇಳುವ ನೋಟಿಸ್ ಸಂ:ಗ್ರಾಅಪ 20 ಇ ಎನ್ ಕ್ಯೂ 01 ದಿ.3-11-03.
6. ಶ್ರೀ ಟಿ.ಎಸ್.ರಾಮನಾಥಗುಪ್ತ , ಅಂದಿನ ಸಹಾಯಕ ಇ ಂಜಿನಿಯರ್ ಇ ವರ ದಿ.22-11-03ರ ಲಿಖಿತ ಹೇಳಿಕೆ.

**ಪ್ರಸ್ತಾವನೆ:**

ಮುಖ್ಯ ಕಾರ್ಯನಿರ್ವಾಹಕ, ಜಿಲ್ಲಾ ಪಂಚಾಯತ್, ತುಮಕೂರು ಇವರು ಮೇಲೆ ಓದಲಾದ ಕ್ರಮ ಸಂಖ್ಯೆ (1)ರ ಪತ್ರದಲ್ಲಿ ಶ್ರೀ ಟಿ.ಎಸ್.ರಾಮನಾಥಗುಪ್ತ , ಸಹಾಯಕ ಇಂಜಿನಿಯರ್ ಇವರು ಪಾವಗಡ ಜಿಲ್ಲಾ ಪಂಚಾಯತ್ ಇಂಜಿನಿಯರಿಂಗ್ ಉಪವಿಭಾಗದಲ್ಲಿ ದಿ.1-8-92ರಿಂದ 15-5-99ರವರೆಗೆ ಕಾರ್ಯನಿರ್ವಹಿಸುತ್ತಿದ್ದಾಗ ಪಾವಗಡ, ಜಿಲ್ಲಾ ಪಂಚಾಯತ್ ಇಂಜಿನಿಯರಿಂಗ್ ಉಪವಿಭಾಗದ ಉಗ್ರಾಣದಿಂದ ಕಾಮಗಾರಿಗಳಿಗಾಗಿ ತೆಗೆದುಕೊಂಡಿದ್ದ ರೂ. 2,14,053-00ಗಳ ಮೊತ್ತದ ಸಾಮಗ್ರಿಗಳನ್ನು ಉಪವಿಭಾಗದ ಉಗ್ರಾಣಕ್ಕಾಗಲೀ ಅಥವಾ ಬೇರೆ ಶಾಖಾಧಿಕಾರಿಗಳಾಗಲಿ ಹಸ್ತಾಂತರಿಸದೆ ತಮ್ಮ ಕರ್ತವ್ಯನಿರ್ವಹಣೆಯಲ್ಲಿ ನಿರ್ಲಕ್ಷತೆ ಹಾಗೂ ಬೇಜವಾಬ್ದಾರಿ ತೋರಿಸಿದ್ದಕ್ಕಾಗಿ ಇವರ ಮೇಲೆ ಇಲಾಖಾ ವಿಚಾರಣೆ ಹೂಡಲು ಕರಡು ದೋಷರೋಪಣಾ ಪಟ್ಟಿಯೊಂದಿಗೆ ಪ್ರಸ್ತಾವನೆ ಸಲ್ಲಿಸಿದ್ದರು.

ಸರ್ಕಾರವು ಪ್ರಸ್ತಾವನೆಯನ್ನು ಪರಿಶೀಲಿಸಿ, ಶ್ರೀ ಟಿ.ಎಸ್.ರಾಮನಾಥಗುಪ್ತ , ಅಂದಿನ ಸಹಾಯಕ ಇಂಜಿನಿಯರ್ ಇವರ ಮೇಲೆ ಕರ್ನಾಟಕ ಸರ್ಕಾರಿ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಾವಳಿಗಳ 1957ರ ನಿಯಮ 11ರ ರೀತ್ಯ ಮೇಲೆ ಓದಲಾದ ಕ್ರಮ ಸಂಖ್ಯೆ (2)ರ ದಿ.3-9-01ರ ಕಾರಣ ಕೇಳುವ ನೋಟಿಸ್‌ನೊಂದಿಗೆ ಆರೋಪಪಟ್ಟಿ ಜಾರಿ ಮಾಡುವ ಮೂಲಕ ಇಲಾಖಾ ವಿಚಾರಣೆ ಹೂಡಿತ್ತು.

ಸರ್ಕಾರದಿಂದ ಜಾರಿಗೊಳಿಸಿದ್ದ ಆರೋಪಗಳಿಗೆ ಇವರು ನಿಗಧಿತ ಅವಧಿಯೊಳಗಾಗಿ ತಮ್ಮ ಮೇಲಿನ ಆರೋಪಗಳ ಬಗ್ಗೆ ಲಿಖಿತ ಹೇಳಿಕೆಯನ್ನು ಸಲ್ಲಿಸದೆ ಇರುವುದರಿಂದ, ಮತ್ತು ಆಪಾದಿತ ಅಧಿಕಾರಿ ಅಕ್ರಮವೆಸಗಿದ್ದಾರೆಂದು ದಾಖಲೆಗಳಿಂದ ಮೇಲ್ನೋಟಕ್ಕೆ ಕಂಡು ಬಂದಿದ್ದುದರಿಂದ ಪ್ರಕರಣದ ಸತ್ಯಾಸತ್ಯತೆ ಅರಿಯಲು ಸದರಿಯವರ ಮೇಲಿನ ಆರೋಪಗಳ ಬಗ್ಗೆ ವಿವರವಾದ ಇಲಾಖಾ ವಿಚಾರಣೆ ನಡೆಸಲು ಮುಖ್ಯ ಕಾರ್ಯನಿರ್ವಾಹಕ, ಜಿಲ್ಲಾ ಪಂಚಾಯತ್, ತುಮಕೂರು ಇವರನ್ನು ಮೇಲೆ ಓದಲಾದ ಕ್ರಮ ಸಂಖ್ಯೆ (3)ರ ಆದೇಶದಲ್ಲಿ ವಿಚಾರಣಾಧಿಕಾರಿಯನ್ನಾಗಿ ನೇಮಿಸಲಾಗಿತ್ತು. ವಿಚಾರಣಾಧಿಕಾರಿಗಳು ಪ್ರಕರಣದಲ್ಲಿ ವಿವರವಾದ ವಿಚಾರಣೆ ನಡೆಸಿ, ಮೇಲೆ ಓದಲಾದ ಕ್ರಮ ಸಂಖ್ಯೆ (4)ರ ದಿ.28-12-02ರಂದು ಸಲ್ಲಿಸಿದ್ದ ವಿಚಾರಣಾ ವರದಿಯನ್ನು ಆಪಾದಿತರ ಮೇಲಿನ ಆರೋಪಗಳು ಸಾಬೀತಾಗಿರುತ್ತದೆಂದು ವಿಚಾರಣಾಧಿಕಾರಿಗಳು ವರದಿ ಮಾಡಿದ್ದರು. ವಿಚಾರಣಾ ವರದಿಯಂತೆ ಮುಂದಿನ ಕ್ರಮ ಜರುಗಿಸುವ ಮುನ್ನ ಸರ್ಕಾರವು ಮೇಲೆ ಓದಲಾದ ಕ್ರಮ ಸಂಖ್ಯೆ(5)ರಂತೆ ಆಪಾದಿತರಿಗೆ 2ನೇ ಕಾರಣ ಕೇಳುವ ನೋಟಿಸ್‌ನ್ನು ಜಾರಿಗೊಳಿಸಿತ್ತು. ಆಪಾದಿತ ಅಧಿಕಾರಿ ಶ್ರೀ ಟಿ.ಎಸ್.ರಾಮನಾಥಗುಪ್ತ, ಅಂದಿನ ಸಹಾಯಕ ಇಂಜಿನಿಯರ್ ಇವರು 2ನೇ ಕಾರಣ ಕೇಳುವ ನೋಟಿಸ್‌ಗೆ ಮೇಲೆ ಓದಲಾದ ಕ್ರಮ ಸಂಖ್ಯೆ (6)ರ ದಿ.22-11-03ರಲ್ಲಿ ನೀಡಿರುವ ಲಿಖಿತ ಉತ್ತರಗಳನ್ನು ಪರಿಶೀಲಿಸಲಾಗಿ, ಅವುಗಳು ಅಸಮಂಜಸವೆಂದು ಕಂಡು ಬಂದಿದ್ದುದರಿಂದ ಹಾಗೂ ಅವರು ತಮ್ಮ ಹೇಳಿಕೆಯನ್ನು ಸಮರ್ಥಿಸಿಕೊಳ್ಳಲು ಯಾವುದೇ ಆಧಾರಗಳನ್ನು ಸಹ ಒದಗಿಸದೆ ಇದ್ದುದರಿಂದ ಅವರ ಮೇಲೆ ಮಾಡಲಾದ ಆರೋಪಗಳು ರುಜುವಾತಾಗುತ್ತವೆಂದು ಶಿಸ್ತು ಪ್ರಾಧಿಕಾರವಾದ ಸರ್ಕಾರವು ನಿಯಮ 11ಎ ರಂತೆ ನಿರ್ಣಯಿಸಿ, ಅವರಿಗೆ ಸೂಕ್ತ ದಂಡನೆ ವಿಧಿಸಲು ನಿರ್ಧರಿಸಿದೆ. ವಿಚಾರಣಾಧಿಕಾರಿಗಳ ಅಭಿಪ್ರಾಯ ಸದರಿ ಅಭಿಪ್ರಾಯದ ಬಗ್ಗೆ ಸರ್ಕಾರದ ನಿರ್ಣಯ ಈ ಕೆಳಕಂಡಂತಿದೆ.

**ಆರೋಪ:**

ಆಪಾದಿತ ಅಧಿಕಾರಿಯ ಸಹಾಯಕ ಇಂಜಿನಿಯರ್‌ರಾಗಿ ಕಾರ್ಯನಿರ್ವಹಿಸುತ್ತಿದ್ದ ಅವಧಿಯಲ್ಲಿ ಮುಂಬಡ್ತಿ ಪಡೆದು ವರ್ಗಾವಣೆಗೊಂಡ ನಂತರ ಉಪವಿಭಾಗದ ಉಗ್ರಾಣದಿಂದ ಪಡೆದುಕೊಂಡಿದ್ದ 2,14,053.00ರೂ.ಗಳ ಸಾಮಗ್ರಿಗಳನ್ನು ಉಪವಿಭಾಗದ ಉಗ್ರಾಣಕ್ಕಾಗಲಿ, ಇಲ್ಲವೇ ಬೇರೆ ಶಾಖಾಧಿಕಾರಿಗಳಿಗಾಗಲಿ ಹಸ್ತಾಂತರ ಮಾಡದೇ ತಾವು ಮುಂಬಡ್ತಿ ಹೊಂದಿದ ನಂತರ ಕರ್ತವ್ಯದಿಂದ ಬಿಡುಗಡೆ ಹೊಂದಿ ತಮ್ಮ ಕರ್ತವ್ಯ ನಿರ್ವಹಣೆಯಲ್ಲಿ ನಿರ್ಲಕ್ಷ ತೋರಿಸಿದರೆಂದು ಆಪಾದಿಸಲಾಗಿತ್ತು. ಆಪಾದನೆಯಲ್ಲಿ ಒಳಗೊಂಡ ಸಾಮಗ್ರಿಗಳು ಹಾಗೂ ಆ ಬಗ್ಗೆ ವಿಚಾರಣಾಧಿಕಾರಿಗಳ ವರದಿ ಈ ಕೆಳಕಂಡಂತಿದೆ.

| ಕ್ರ.ಸ | ಸಾಮಗ್ರಿಗಳ ವಿವರ | ಪ್ರಮಾಣ | ಬಿಲ್ | ಮೊತ್ತ ರೂ.ಗಳಲ್ಲಿ | ವಿಚಾರಣಾಧಿಕಾರಿಗಳ ವರದಿ |
|---|---|---|---|---|---|
| 1 | ಬಾಂಡ್ಲಿಗಳು | 98 ಸಂಖ್ಯೆ | 45-50 | 4459/- | ಉಪವಿಭಾಗಕ್ಕೆ ಹಿಂದಿರುಗಿಸಿದ್ದಾರೆ. |
| 2 | ಗುದ್ದಲಿಗಳು | 19 ಸಂ. 1.10 | 140-00 | 2600/- | ಉಪವಿಭಾಗಕ್ಕೆ ಹಿಂದಿರುಗಿಸಿದ್ದಾರೆ. |
| 3 | ಸಲಿಕೆಗಳು | 24 ಸಂ. | 74-00 | 1776/- | ಉಪವಿಭಾಗಕ್ಕೆ ಹಿಂದಿರುಗಿಸಿದ್ದಾರೆ. |
| 4 | 24 ಇಂಚು ರಿಂಚುಗಳು | 31 ಸಂ. | 656-00 | 20398/- | ಶ್ರೀ ವಿಜಯ ಐ.ಸಿ.ಎಂ ಇವರು ಸ್ವೀಕರಿಸಿರುವುದಾಗಿ ಹೇಳಿಕೆ ನೀಡಿದ್ದಾರೆ. |
| 5 | 18ಇಂಚು ರಿಂಚುಗಳು | 21 ಸಂ. 519 | 519-00 | 10899/- | ಶ್ರೀ ವಿಜಯ ಐ.ಸಿ.ಎಂ ಇವರು ಸ್ವೀಕರಿಸಿರುವುದಾಗಿ ಹೇಳಿಕೆ ನೀಡಿದ್ದಾರೆ. |
| 6 | 12ಇಂಚು ರಿಂಚುಗಳು | 15 ಸಂ.170 | 170-00 | 2550/- | ಶ್ರೀ ವಿಜಯ ಐ.ಸಿ.ಎಂ ಇವರು ಸ್ವೀಕರಿಸಿರುವುದಾಗಿ ಹೇಳಿಕೆ ನೀಡಿದ್ದಾರೆ. |
| 7 | ಡೀಸೆಲ್ ಕಾಂಕ್ರೀಟ್ ಮಿಕ್ಸ್‌ರ್ | 1 ಸಂ. | 39800-00 | 39800/- | ಶ್ರೀ ಗೋಪಿನಾಥ್, ಕಿಇಂ ಇವರಿಗೆ ಹಸ್ತಾಂತರಿಸಿರುವುದು ದಾಖಲೆಯಿಂದ ಕಂಡು ಬರುತ್ತದೆ. |
| 8 | ಲೆವಲಿಂಗ್ ಇನ್‌ಸ್ಟ್ರು ಮೆಂಟ್ | 1 ಸೆಟ್ | 3000-00 | 3000/- | ಇದು ಆಪಾದಿತರ ವಶದಲ್ಲೇ ಇದೆ ಎಂದಿದ್ದಾರೆ. |
| 9 | ಹ್ಯಾಂಡ್ ಮಿಕ್ಸ್‌ರ್ | 2 ಸಂ. | 5976-00 | 11752/- | ಉಪವಿಭಾಗಕ್ಕೆ ಹಿಂದಿರುಗಿಸಿದ್ದಾರೆ. |
| 10 | ಚೈನ್ ಪುಲ್ಲಿ | 2 ಸಂ. | 8800-00 | 17600/- | ಶ್ರೀ ವಿಜಯ ಐ.ಸಿ.ಎಂ ಇವರು ಸ್ವೀಕರಿಸಿರುವುದಾಗಿ ಹೇಳಿಕೆ ನೀಡಿದ್ದಾರೆ. |
| 11 | ಕಬ್ಬಿಣದ ಕೊಡಗಳು | 6 ಸಂ. | 69-00 | 414/- | ಉಪವಿಭಾಗಕ್ಕೆ ಹಿಂದಿರುಗಿಸಿದ್ದಾರೆ. |

| ಕ್ರ.ಸ | ಸಾಮಗ್ರಿಗಳ ವಿವರ | ಪ್ರಮಾಣ | ಬಿಲ್ | ಮೊತ್ತ ರೂ.ಗಳಲ್ಲಿ | ವಿಚಾರಣಾಧಿಕಾರಿಗಳ ವರದಿ |
|---|---|---|---|---|---|
| 12 | ಮ್ಯಾಗನೆಟ್ 1 ಮೀ ಅಳತೆ ಹಗ್ಗ ಬೋರ್ ವೆಲ್ | 1 ಸಂ. | 4600-00 | 4800/- | ಶ್ರೀ ವಿಜಯ ಐ.ಸಿ.ಎಂ ಇ ವರು ಸ್ವೀಕರಿಸಿರುವುದಾಗಿ ಹೇಳಿಕೆ ನೀಡಿದ್ದಾರೆ. |
| 13 | ಹ್ಯಾಂಡ್ ಪಂಪ್ ಲಿಫ್ಟಿಂಗ್ ಲೈನ್ | 1 ಸಂ. | 250-00 | 250/- | ಶ್ರೀ ವಿಜಯ ಐ.ಸಿ.ಎಂ ಇ ವರು ಸ್ವೀಕರಿಸಿರುವುದಾಗಿ ಹೇಳಿಕೆ ನೀಡಿದ್ದಾರೆ. |
| 14 | ಡೈ ಸೆಟ್ | 1 ಸೆಟ್ | 2025-00 | 2025/- | ಶ್ರೀ ವಿಜಯ ಐ.ಸಿ.ಎಂ ಇ ವರು ಸ್ವೀಕರಿಸಿರುವುದಾಗಿ ಹೇಳಿಕೆ ನೀಡಿದ್ದಾರೆ. |
| 15 | ಖಾಲಿ ಸಿಮೆಂಟ್ ಚೀಲ | 2670 ಸಂ. | 1-00 | 2670/- | |
| 16 | ಪಿಗ್‌ಲೆಡ್ | 200.5 ಕೆಜಿ | 443-00 | 88821/- | ಶ್ರೀ ವಿಜಯ ಐ.ಸಿ.ಎಂ ಇ ವರು ವಿವಿಧ ಕಾಮಗಾರಿಗೆ ಉಪಯೋಗಿಸಿರುವುದಾಗಿ ತಿಳಿಸಿದ್ದಾರೆ. |

**ವಿಚಾರಣಾಧಿಕಾರಿಗಳ ಅಭಿಪ್ರಾಯ:**

ಶ್ರೀ ಟಿ.ಎಸ್.ರಾಮನಾಥಗುಪ್ತ, ಅಂದಿನ ಸಹಾಯಕ ಇ ಂಜಿನಿಯರ್ ಇ ವರು ಪಾವಗಡ ಜಿಲ್ಲಾ ಪಂಚಾಯತ್ ಇ ಂಜಿನಿಯರಿಂಗ್ ಉಪ ವಿಭಾಗದಿಂದ ವರ್ಗಾವಣೆಯಾದ ನಂತರ ಈ ಅಧಿಕಾರಿಯು ತಮ್ಮ ವಶದಲ್ಲಿದ್ದ ವಿವಿಧ ಕಾಮಗಾರಿಗಳಿಗೆ ಸಂಬಂಧಿಸಿದ ಸಾಮಗ್ರಿಗಳನ್ನು ಅದೇ ಕಛೇರಿಯಲ್ಲಿ ಕರ್ತವ್ಯ ನಿರ್ವಹಿಸುತ್ತಿರುವ ನೌಕರರಿಗೆ ಯಾವುದೇ ಲಿಖಿತ ದಾಖಲೆಗಳು ಇ ಲ್ಲದೆ ಹಸ್ತಾಂತರಿಸಿರುವುದು ಕಂಡು ಬಂದಿದೆ. ಆದರೆ, ಕ್ರಮ ಸಂಖ್ಯೆ 8 ಲೆವೆಲಿಂಗ್ ಇ ನ್‌ಸ್ಟ್ರುಮೆಂಟ್ ಇ ದರ ಮೌಲ್ಯ ರೂ.3,000-00ಗಳಾಗಿದ್ದು, ಇ ದನ್ನು ಯಾರಿಗೂ ವಹಿಸಿಕೊಟ್ಟಿರುವುದಿಲ್ಲ. ಹಾಗೂ ಇ ವರೇ ಒಪ್ಪಿಕೊಂಡಿರುವ ಪ್ರಕಾರ, ಈ ಸಾಮಗ್ರಿ ಅವರ ವಶದಲ್ಲಿದೆ. ಹಾಗೂ ಕ್ರಮ ಸಂಖ್ಯೆ 15ರಲ್ಲಿ ನಮೂದಿಸಿದ 2670 ಖಾಲಿ ಸಿಮೆಂಟ್ ಚೀಲಗಳಲ್ಲಿ ಇ ಲಾಖಾ ಕಾಮಗಾರಿಗೆ ಉಪಯೋಗಿಸಿ ಉಳಿದ 251 ಖಾಲಿ ಸಿಮೆಂಟ್ ಚೀಲಗಳು ಇ ವರ ವಶದಲ್ಲಿದ್ದು, ಅವರು ನಿರುಪಯುಕ್ತವಾಗಿ ದೆಯೆಂದು ಹಾಗೂ ಈ ಚೀಲಗಳ ಬೆಲೆ ಕಟ್ಟಿಕೊಡುವುದಾಗಿ ಒಪ್ಪಿರುತ್ತಾರೆ. ಕ್ರಮ ಸಂಖ್ಯೆ 15ರಲ್ಲಿ ನಮೂದಿಸಿದ 200.5ಕೆ.ಜಿ. ಪಿಗ್ ಲೆಡ್ ಮೌಲ್ಯ 88,821-00ರೂ.ಗಳು ಶ್ರೀ ವಿಜಯ, ಐ.ಸಿ.ಎಂ ಇ ವರ ಮೂಲಕ ಇ ಲಾಖಾ ಕಾಮಗಾರಿಗೆ ಉಪಯೋಗಿಸಿರುವುದಾಗಿ ತಿಳಿಸಿದ್ದಾರೆ. ಇ ಲಾಖಾ ವಿಚಾರಣೆ ದಿನಾಂಕದಂದು ಹಾಜರಿದ್ದ ಶ್ರೀ ವಿಜಯ, ಐ.ಸಿ.ಎಂ ಇ ವರು ಹಾಗೂ ಮಂಡನಾಧಿಕಾರಿಗಳು ಯಾವ ಆಕ್ಷೇಪಣೆ ವ್ಯಕ್ತಪಡಿಸಿಲ್ಲ. ಆದ್ದರಿಂದ, ಸದರಿ ಆರೋಪವು ಭಾಗಶ: ಸಾಬೀತಾಗಿದೆಯೆಂದು ವಿಚಾರಣಾಧಿಕಾರಿಗಳು ತಮ್ಮ ಅಭಿಪ್ರಾಯ ನೀಡಿರುತ್ತಾರೆ.

**ವಿಚಾರಣಾ ವರದಿಯ ಮೇಲೆ ಶಿಸ್ತು ಪ್ರಾಧಿಕಾರದ ನಿರ್ಣಯ.**

ಸರ್ಕಾರವು ಕರ್ನಾಟಕ ಸರ್ಕಾರಿ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಾವಳಿಗಳು 1957ರ ನಿಯಮ 11ರಂತೆ ವಿಚಾರಣಾ ವರದಿಯನ್ನು ಪರಿಶೀಲಿಸಿದಾಗ ಇ ವರು ರೂ.5670-00ಗಳ ಪಿಗ್‌ಲೆಡ್‌ನ್ನು ದುರುಪಯೋಗಪಡಿಸಿಕೊಂಡು ಸರ್ಕಾರಕ್ಕೆ ಆರ್ಥಿಕ ನಷ್ಟವುಂಟು ಮಾಡಿರುವುದರಿಂದ , ಆಪಾದಿತರ ಮೇಲಿನ ಆರೋಪ ಭಾಗಶ: ರುಜುವಾತಾಗುತ್ತದೆಂದು ನಿರ್ಣಯಿಸಿ, ಆ ಮೊತ್ತವನ್ನು ಅವರಿಂದ ವಸೂಲ್ಮಾಡಲು ಹಾಗೂ ಅವರ ಈ ಕರ್ತವ್ಯಲೋಪಕ್ಕಾಗಿ ಅವರಿಗೆ ಸೂಕ್ತ ದಂಡನೆ ವಿಧಿಸಲು ಸರ್ಕಾರವು ನಿರ್ಧರಿಸಿ, ಈ ಕೆಳಕಂಡಂತೆ ಆದೇಶಿಸಿದೆ.

**ಆದೇಶ ಸಂಖ್ಯೆ ಗ್ರಾಅಪ 20 ಇ ಎನ್ ಕ್ಯೂ 01 ಬೆಂಗಳೂರು, ದಿನಾಂಕ: 14ನೇ ಅಕ್ಟೋಬರ್ 04**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ ಶ್ರೀ ಟಿ.ಎಸ್.ರಾಮನಾಥಗುಪ್ತ , ಅಂದಿನ ಸಹಾಯಕ ಇ ಂಜಿನಿಯರ್, ಜಿಲ್ಲಾ ಪಂಚಾಯತ್ ಇ ಂಜಿನಿಯರಿಂಗ್ ಉಪವಿಭಾಗ, ಪಾವಗಡ ಇ ವರು ಸದರಿ ಉಪವಿಭಾಗದಲ್ಲಿ ದಿ.1-8-92ರಿಂದ 15-5-99ರವರೆಗೆ ಕಾರ್ಯ ನಿರ್ವಹಿಸುತ್ತಿದ್ದಾಗ, ಉಗ್ರಾಣದಿಂದ ಕಾಮಗಾರಿಗಳಿಗಾಗಿ ತೆಗೆದುಕೊಂಡಿದ್ದ ರೂ. 2,14,053-00 ಗಳ ಮೊತ್ತದ ಸಾಮಗ್ರಿಗಳ ಪೈಕಿ ದುರುಪಯೋಗಪಡಿಸಿಕೊಂಡಿರುವ ಪಿಗ್‌ಲೆಡ್‌ನ ಬಾಬ್ತು ಸರ್ಕಾರಕ್ಕೆವುಂಟಾಗಿರುವ ಆರ್ಥಿಕ ನಷ್ಟದ ಮೊತ್ತ ರೂ.5,670-00 (ಐದು ಸಾವಿರದ ಆರು ನೂರ ಎಪ್ಪತ್ತು ಮಾತ್ರ) ಅವರ ವೇತನದಿಂದ ಕರ್ನಾಟಕ ಸರ್ಕಾರಿ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಾವಳಿಗಳು 1957ರ ನಿಯಮ 8(iv) ರಂತೆ ವಸೂಲು ಮಾಡಲು ಹಾಗೂ ನಿಯಮ 8(iii)ರಂತೆ ಅವರ ಮುಂದಿನ ಒಂದು ವಾರ್ಷಿಕ ವೇತನ ಬಡ್ತಿಯನ್ನು ಸಂಚಿತ ಪರಿಣಾಮದೊಂದಿಗೆ ತಡೆಹಿಡಿಯುವ ದಂಡನೆಯನ್ನು ವಿಧಿಸಲು ಸರ್ಕಾರವು ಆದೇಶಿಸಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎ.ಹೊನ್ನಪ್ಪ ನಾಯಕ್,**

ಪಿ.ಆರ್. 1183

ಸರ್ಕಾರದ ಅಧೀನ ಕಾರ್ಯದರ್ಶಿ(ಸೇವೆಗಳು-ಎ),
ಗ್ರಾಮೀಣಾಭಿವೃದ್ಧಿ ಮತ್ತು ಪಂ.ರಾಜ್ ಇ ಲಾಖೆ.

**ಒಳಾಡಳಿತ ಸಚಿವಾಲಯ**

**ವಿಷಯ :** ಶ್ರೀ ಹೆಚ್. ಎಸ್. ಸಿದ್ದಯ್ಯ ಪಿಸಿ 530 ಮೈಸೂರು ರವರು ಸರ್ಕಾರಕ್ಕೆ ಸಲ್ಲಿಸಿರುವ ಪರಿಷ್ಕರಣ ಮೇಲ್ಮನವಿ ಅರ್ಜಿ ಬಗ್ಗೆ.

**ಓದಲಾಗಿದೆ :**

1. ಡಿಸಿಪಿ, ಕೇಂದ್ರಸ್ಥಾನ, ಸಂಚಾರ ಮತ್ತು ಅಪರಾಧ ಮೈಸೂರು ನಗರ ರವರ ಅ.ಸಂ: ಶಿಕ್ಷೆ: 96:2001-02 ದಿನಾಂಕ: 20.9.2003.
2. ಪೋಲಿಸ್ ಕಮೀಷನರ್ ಮೈಸೂರು ನಗರ ರವರ ಅ.ಸಂ: ಮೇಲ್ಮನವಿ: 19:2003-04 ದಿನಾಂಕ: 18.12.2003
3. ಅರ್ಜಿದಾರರ ಮನವಿ ದಿನಾಂಕ: 17.2.2004.
4. ಮಹಾ ನಿರ್ದೇಶಕರು ಮತ್ತು ಆರಕ್ಷಕ ಮಹಾ ನಿರೀಕ್ಷಕರವರ ಪತ್ರ ಸಂ: ಅಪೀಲು:2:15:2004 ದಿನಾಂಕ: 30.4.2004

**ಪ್ರಸ್ತಾವನೆ:**

ಶ್ರೀ ಹೆಚ್. ಎಸ್. ಸಿದ್ದಯ್ಯ, ಪಿಸಿ 530, ಮೈಸೂರು ರವರ ವಿರುದ್ದ (ಇನ್ನು ಮುಂದೆ ಅರ್ಜಿದಾರರೆಂದು ಕರೆಯಲ್ಪಡುವ) ಈ ಕೆಳಕಂಡ ದೋಷಾರೋಪಕ್ಕಾಗಿ ಕರ್ನಾಟಕ ರಾಜ್ಯ ಪೊಲೀಸ್ (ಶಿಸ್ತು ನಡವಳಿ) ನಿಯಮಾವಳಿ 1965ರ ನಿಯಮ 7ರಡಿ ಶಿಸ್ತು ಕ್ರಮ ಜರುಗಿಸಲಾಗಿದೆ.

**ದೋಷಾರೋಪಣ:**

"ಈ ಹಿಂದೆ ಲಷ್ಕರ್ ಠಾಣೆಯಲ್ಲಿ ಕರ್ತವ್ಯ ನಿರ್ವಹಿಸುತ್ತಿದ್ದಾಗ ದಿನಾಂಕ: 2.3.2002 ರಂದು ಇರ್ವಿನ್ ರಸ್ತೆಯ ಜವಲಾಲ್ ಷಾವಲಿ ದರ್ಗಾಕ್ಕೆ ಬಂದೋಬಸ್ತ್ ಕರ್ತವ್ಯಕ್ಕೆ ಗೈರುಹಾಜರಾಗಿದ್ದು ಈ ಬಗ್ಗೆ ಪಿ.ಎಸ್.ಐ ರವರು ಜ್ಞಾಪನ ನೀಡಿದಾಗ ಜ್ಞಾಪನಕ್ಕೆ ಉತ್ತರ ನೀಡುವಾಗ ಜ್ಞಾಪನದಲ್ಲಿ ತಿಳಿಸಿದ್ದ ವಿಷಯಕ್ಕೆ ವಿವರಣೆ ನೀಡದೇ ಸದರಿ ಪಿಎಸ್ಐ ರವರ ಮೇಲೆ ಸಲ್ಲದ ಆರೋಪಗಳನ್ನು ಹಾಗೂ ಜಾತಿ ನಿಂದನೆ ಮಾಡಿದ ಆರೋಪ ಮಾಡಿ ಸಮಜಾಯಿಷಿ ನೀಡಿದ್ದು, ಈ ಬಗ್ಗೆ ವಿಚಾರಿಸಿದ ಪಿ.ಐ. ರವರೊಂದಿಗೆ, ಪಿ.ಎಸ್.ಐ ಜಾತಿ ನಿಂದನೆ ಮಾಡಿಲ್ಲ ಅವರನ್ನು ಹೆದರಿಸಲು ಈ ರೀತಿ ಆರೋಪಿಸಿರುವುದಾಗಿ ಹೇಳಿದ್ದು, ಶಿಸ್ತಿನ ಇಲಾಖೆಯಲ್ಲಿ ಕರ್ತವ್ಯ ನಿರ್ವಹಿಸುತ್ತಿರುವ ಸದರಿಯವರು ಮೇಲಾಧಿಕಾರಿಗಳೊಂದಿಗೆ ಗೌರವದಿಂದ ನಡೆದುಕೊಳ್ಳದೇ ಸಲ್ಲದ ಆರೋಪಗಳನ್ನು ಹೊರಿಸಿ, ಇತರ ಸಿಬ್ಬಂದಿಗಳನ್ನು ಎತ್ತಿ ಕಟ್ಟಿ ಸರ್ಕಾರಿ ಕರ್ತವ್ಯಕ್ಕೆ ಅಡ್ಡಿ ಮಾಡಿ ಕರ್ತವ್ಯದಲ್ಲಿ ದುರ್ನಡತೆ ಉದ್ಧಟತನ ಪ್ರದರ್ಶಿಸಿರುವ ಬಗ್ಗೆ"

ಮೇಲ್ಕಂಡ ಆರೋಪದ ಬಗ್ಗೆ ಅರ್ಜಿದಾರರ ಸಮಜಾಯಿಷಿಯನ್ನೊಪ್ಪದ ಶಿಸ್ತು ಪ್ರಾಧಿಕಾರಿ ಮೇಲೆ (1)ರಲ್ಲಿ ಓದಲಾದ ಆದೇಶದಲ್ಲಿ ಅರ್ಜಿದಾರರ ಮುಂದಿನ ವಾರ್ಷಿಕ ವೇತನ ಬಡ್ತಿಯನ್ನು ಸಂಚಿತಪರಿಣಾಮರಹಿತವಾಗಿ 1 ವರ್ಷ ಕಾಲ ಮುಂದೂಡಿರುತ್ತಾರೆ.

ಈ ಆದೇಶದ ವಿರುದ್ಧ ಸಲ್ಲಿಸಿದ ಮೇಲ್ಮನವಿಯಲ್ಲಿ ಸತ್ಯಾಂಶವಿಲ್ಲವೆಂದು ಮೇಲೆ (2)ರಲ್ಲಿ ಓದಲಾದ ಆದೇಶದಲ್ಲಿ ಮೇಲ್ಮನವಿಯನ್ನು ತಿರಸ್ಕರಿಸಿರುತ್ತಾರೆ.

ಈ ಎರಡು ಆದೇಶಗಳ ವಿರುದ್ಧ ಅರ್ಜಿದಾರರು ಸರ್ಕಾರಕ್ಕೆ ಸಲ್ಲಿಸಿರುವ ಪರಿಷ್ಕರಣಾ ಮೇಲ್ಮನವಿ ಅರ್ಜಿಯನ್ನು ಇಲಾಖಾ ವಿಚಾರಣಾ ದಾಖಲೆಗಳೊಂದಿಗೆ ಪರಿಶೀಲಿಸಲಾಗಿದೆ. ತಾನು ಜಮಾಲ್ ಷಾವಲಿ ದರ್ಗಾ ಕರ್ತವ್ಯಕ್ಕೆ ಗೈರುಹಾಜರ್ ಆಗಿರಲಿಲ್ಲ. ಪಿ.ಎಸ್.ಐ. ರವರು ದುರುದ್ದೇಶದಿಂದ ತನ್ನ ವಿರುದ್ಧ ಆರೋಪ ಹೊರಿಸಿರುತ್ತಾರೆ ಜಾತಿ ನಿಂದನೆ ಮಾಡಿದ ಆರೋಪವನ್ನು ಒಂದು ವರ್ಷ ಇಟ್ಟು ಪರಿಶೀಲಿಸಿಲ್ಲ ಪಿಎಸ್ಐ ರವರನ್ನು ಹೆದರಿಸುವ ಸಲುವಾಗಿ ಜಾತಿ ನಿಂದನೆ ಮಾಡಿರುತ್ತೇನೆ. ಅನ್ನುವುದು ಸುಳ್ಳು. ತಾನು ಸಿಬ್ಬಂದಿಯನ್ನು ಎತ್ತಿ ಕಟ್ಟುತ್ತೇನೆ ಅನ್ನುವುದು ಸತ್ಯವಲ್ಲ ಎಂದು ವಾದಿಸಿರುತ್ತಾರೆ.

ಆದರೆ ವಿನಾಕಾರಣ ಅರ್ಜಿದಾರರು ಪ್ರಕರಣವನ್ನು ಬೆಳೆಸಿರುತ್ತಾರೆ. ಸೂಕ್ತ ರೀತಿಯಲ್ಲಿ ಪಿ.ಎಸ್.ಐ. ರವರಿಗೆ ಸಮಜಾಯಿಷಿ ನೀಡಿದ್ದರೆ ಪ್ರಕರಣ ಅಲ್ಲಿಗೇ ನಿಂತು ಹೋಗುತ್ತಿತ್ತು. ಅಲ್ಲದೆ ನಿಯಮ 7ಕ್ಕೆ ಸಮಜಾಯಿಷಿ ನೀಡುವಾಗ ವಿನಾಕಾರಣ ತನ್ನ ವಿರುದ್ಧ ದೋಷಾರೋಪ ಹೊರಿಸಿ ಜಾತಿನಿಂದನೆ ಮಾಡಿರುತ್ತಾರೆ ಎಂದು ನಮೂದಿಸಿ ನಂತರ ಪಿ.ಐ. ರವರೊಂದಿಗೆ ಸುಮ್ಮನೆ ಮುಂಜಾಗ್ರತೆಯಿಂದ ಆ ರೀತಿ ಆರೋಪ ಮಾಡಿದೆ ಎಂದು ಹೇಳಿರುವುದರಿಂದ ಅವರ ಕರ್ತವ್ಯದಲ್ಲಿನ ನಿರ್ಲಕ್ಷ್ಯತೆ ಸ್ಪಷ್ಟವಾಗುತ್ತದೆ. ಅವರ ಮನವಿಯಲ್ಲಿ ಪರಿಗಣಿಸಬಹುದಾದ ಅಂಶಗಳಿಲ್ಲದಿರುವುದನ್ನು ಪರಿಗಣಿಸಿ ಸರ್ಕಾರವು ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂ: ಒಇ 35 ಪೊಸಿಅ 2004 ದಿನಾಂಕ: 1ನೇ ಅಕ್ಟೋಬರ್ 2004**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳಿಂದಾಗಿ, ಕರ್ನಾಟಕ ರಾಜ್ಯ ಪೊಲೀಸ್ (ಶಿಸ್ತು ನಡವಳಿ) ನಿಯಮಾವಳಿ 1965 ರನ್ವಯ ಸರ್ಕಾರಕ್ಕೆ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಶ್ರೀ ಹೆಚ್. ಎನ್. ಸಿದ್ದಯ್ಯ, ಪಿಸಿ 530, ಮೈಸೂರು ರವರು ಸರ್ಕಾರಕ್ಕೆ ಸಲ್ಲಿಸಿರುವ ಪರಿಷ್ಕರಣಾ ಮೇಲ್ಮನವಿ ಅರ್ಜಿಯನ್ನು ತಿರಸ್ಕರಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,
**ಆರ್. ರಂಗಮಣಿ**
ಸರ್ಕಾರದ ಅಧೀನ ಕಾರ್ಯದರ್ಶಿ,
ಒಳಾಡಳಿತ ಇಲಾಖೆ (ಪೊಲೀಸ್ ಸೇವೆಗಳು).

ಪಿ.ಆರ್.1175

**ವಿಷಯ :** ಶ್ರೀ ಎಂ. ವಿ. ಕುಮಾರ್, ಸಿಪಿಸಿ 247, ಮಂಡ್ಯ ಜಿಲ್ಲೆರವರು ಸರ್ಕಾರಕ್ಕೆ ಸಲ್ಲಿಸಿರುವ ಪರಿಷ್ಕರಣ ಅರ್ಜಿ ಬಗ್ಗೆ.

**ಓದಲಾಗಿದೆ :**
1. ಎಸ್.ಐ. ಮಂಡ್ಯ ಜಿಲ್ಲೆರವರ ಅ.ಸಂ ಸಿಬ್ಬಂದಿ-2: ಪಿಆರ್: 49: 2001-02 ಓಬಿ 286: 2001-02 ದಿನಾಂಕ: 29.9.2001.
2. ಐ.ಜಿ.ಪಿ. ದ.ವ. ಮೈಸೂರುರವರ ಅ.ಸಂ. ಅಪೀಲು:50:2001-02 ದಿನಾಂಕ: 15.4.2002.
3. ಅರ್ಜಿದಾರರ ಮನವಿ ದಿನಾಂಕ: 22.8.2003.
4. ಮಹಾ ನಿರ್ದೇಶಕರು ಮತ್ತು ಆರಕ್ಷಕ ಮಹಾ ನಿರೀಕ್ಷಕರವರ ಪತ್ರ ಸಂ: ಅಪೀಲು (2) 70: 2003-04 ದಿನಾಂಕ: 9.1.2004

**ಪ್ರಸ್ತಾವನೆ:**

ಶ್ರೀ ಎಂ. ವಿ. ಕುಮಾರ್, ಸಿಪಿಸಿ 247, ಹಲಗೂರು ಪೊಲೀಸ್ ಠಾಣೆ ಮಂಡ್ಯ ಜಿಲ್ಲೆರವರ ವಿರುದ್ಧ (ಇನ್ನು ಮುಂದೆ ಅರ್ಜಿದಾರರೆಂದು ಕರೆಯಲ್ಪಡುವ) ಈ ಕೆಳಕಂಡ ದೋಷಾರೋಪಕ್ಕಾಗಿ ಕರ್ನಾಟಕ ರಾಜ್ಯ ಪೊಲೀಸ್ (ಶಿಸ್ತು ನಡವಳಿ) ನಿಯಮಾವಳಿ 1965ರ ನಿಯಮ 7ರಡಿ ಶಿಸ್ತು ಕ್ರಮ ಜರುಗಿಸಲಾಗಿದೆ.

**ದೋಷಾರೋಪಣ:**

"ಹಲಗೂರು ಪೊಲೀಸ್ ಠಾಣೆಯಲ್ಲಿ ಕರ್ತವ್ಯ ನಿರ್ವಹಿಸುತ್ತಿರುವ ನೀವು ಜಿಲ್ಲಾ ಪೊಲೀಸ್ ಕಛೇರಿಯ ಗಣಕ ವಿಭಾಗದಲ್ಲಿ ದಿನಾಂಕ: 23.12.2000 ರಿಂದ ಕರ್ತವ್ಯ ನಿರ್ವಹಿಸುತ್ತಿದ್ದು ದಿನಾಂಕ: 2.3.2001 ರಿಂದ 6.3.2001, 6.6.2001, 7.6.2001 17.6.2001 ರಿಂದ 22.6.2001ರ ವರೆಗೂ ಸಹ ಮೇಲಾಧಿಕಾರಿಯಿಂದ ಅನುಮತಿ ಅಥವಾ ರಜೆ ಪಡೆಯದೆ ಅನಧಿಕೃತವಾಗಿ ಗೈರುಹಾಜರಾಗಿರುತ್ತೀರಿ. ಅಲ್ಲದೇ ಹಾಜರಾತಿಯ ಪುಸ್ತಕದಲ್ಲಿ ದಿನಾಂಕ: 19.5.2001, 24.5.2001, 25.5.2001, 6.6.2001 ಹಾಗೂ 7.1.2001ರ ತಮ್ಮ ಹಾಜರಾತಿಯ ಬಗ್ಗೆ ತಿದ್ದಿದ್ದು ಸಹಿಯನ್ನು ಹಾಕಿ ಹಾಜರಾತಿಗಳ ನಮೂನೆಯನ್ನು ಹಾಳುಗೆಡವಿರುತ್ತೀರಿ. ಇದರಿಂದಾಗಿ ನೀವು ಕರ್ತವ್ಯದಲ್ಲಿ ಬೇಜವಾಬ್ದಾರಿತನ ಮತ್ತು ದುರ್ನಡತೆ ಪ್ರದರ್ಶಿಸಿರುತ್ತೀರಿ"

